KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೯, ೨೦೧೧ (ಜ್ಯೇಷ್ಠ ೧೯ ಶಕ ವರ್ಷ ೧೯೩೩) | ಸಂಚಿಕೆ ೨೩ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:10/ಅ.ಸೂ/ಡಿಸಿಪಿ/ಸಂಪೂ/2011, ದಿನಾಂಕ:11.05.2011**

ಬೆಂಗಳೂರು ನಗರ– ಮೈಕೋ ಲೇಔಟ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಮೀನಾಕ್ಷಿ ದೇವಸ್ಥಾನದ ಜಂಕ್ಷನ್‌ನಿಂದ ಹುಳಿಮಾವು ಪೊಲೀಸ್ ಠಾಣೆವರೆಗೆ ಬಿ.ಡಿ.ಎ. ರಸ್ತೆಯ ಎರಡೂ ಕಡೆಗಳಲ್ಲೂ ಶಾಲಾ ಕಾಲೇಜುಗಳು, ವಸತಿ ಗೃಹ ಸಂಕೀರ್ಣಗಳು ವ್ಯಾಪಿಸಿರುತ್ತವೆ. ಬಿ.ಡಿ.ಎ. ರಸ್ತೆಯ ಅಗಲವು ಸುಮಾರು 55 ರಿಂದ 60 ಅಡಿ ಅಗಲವಾಗಿದ್ದು ರಸ್ತೆ ವಿಭಜಕವನ್ನು ಹೊಂದಿ ದ್ವಿಮುಖ ಸಂಚಾರ ವ್ಯವಸ್ಥೆಯಿಂದ ಕೂಡಿರುತ್ತದೆ. ಈ ರಸ್ತೆಗೆ ಹೊಂದಿಕೊಂಡಿರುವ ಬಿ.ಜಿ. ರಸ್ತೆ ಕೇವ್ ಟೆಂಪಲ್ ರಸ್ತೆಯ ಜಂಕ್ಷನ್‌ನಿಂದ ಬಿ.ಜಿ.ಎಸ್. ಜಂಕ್ಷನ್‌ವರೆಗೆ ಸುಮಾರು 30ನ ಅಡಿ ಅಗಲದ ಕಿರಿದಾದ ಮತ್ತು ತಿರುವಿನಿಂದ ಕೂಡಿರುವ ರಸ್ತೆಯು ಕಿರಿದಾಗಿದ್ದು ದ್ವಿಮುಖ ಸಂಚಾರ ವ್ಯವಸ್ಥೆಯನ್ನು ಹೊಂದಿರುತ್ತದೆ. ಈ ರಸ್ತೆಗಳ ಮಾರ್ಗವಾಗಿ ನಗರದಿಂದ ಬಿ.ಡಿ.ಎ. ರಸ್ತೆಯ ಮಾರ್ಗವಾಗಿ ಬೇಗೂರು, ಬಿ.ಡಿ.ಎ. ಬಡಾವಣೆ, ನ್ಯಾನಪ್ಪನಹಳ್ಳಿ, ಅಕ್ಷಯನಗರ ಮತ್ತು ಹುಳಿಮಾವು ಕಡೆಗೆ ಸಂಚರಿಸುವ ವಾಹನಗಳ ಸಂಚರಣೆಯಿಂದ ಸಂಚಾರ ದಟ್ಟಣೆಯು ರಸ್ತೆಯಾಗಿ ಮಾರ್ಪಟ್ಟಿರುತ್ತದೆ. ಮೀನಾಕ್ಷಿ ದೇವಸ್ಥಾನದ ಜಂಕ್ಷನ್‌ನಿಂದ ಹುಳಿಮಾವು ಪೊಲೀಸ್ ಠಾಣೆಯವರೆಗೆ ಸುಮಾರು 1 ಕಿ.ಮೀ. ಉದ್ದದ ರಸ್ತೆಯಲ್ಲಿ ಎರಡೂ ಕಡೆಗಳಲ್ಲಿ ವಾಹನಗಳು ನಿಲುಗಡೆಯಾಗುವುದರಿಂದ ಕಿರಿದಾಗಿರುವ ರಸ್ತೆಯಲ್ಲಿ ಸಂಚಾರಕ್ಕೆ ಅತೀವ ಅಡಚಣೆಯಾಗುವುದಲ್ಲದೆ ಕೆಲವು ವೇಳೆಗಳಲ್ಲಿ ಸಂಚಾರ ಸ್ಥಗಿತಗೊಳ್ಳುವ ಮತ್ತು ಅಪಘಾತಗಳು ಸಂಭವಿಸುವ ಸಾಧ್ಯತೆಗಳಿರುವುದರಿಂದ ಮೀನಾಕ್ಷಿ ದೇವಸ್ಥಾನದ ಜಂಕ್ಷನ್‌ನಿಂದ ಹುಳಿಮಾವು ಪೊಲೀಸ್ ಠಾಣೆವರೆಗೆ ಹಾಗೂ ಹೊಂದಿಕೊಂಡಿರುವ ಬಿ.ಜಿ. ರಸ್ತೆ ಮತ್ತು ಕೇವ್ ಟೆಂಪಲ್ ರಸ್ತೆಯ ಜಂಕ್ಷನ್‌ನಿಂದ ಬಿ.ಜಿ.ಎಸ್. ಶಾಲೆಯ ಜಂಕ್ಷನ್‌ವರೆಗೆ ರಸ್ತೆಗಳ ಎರಡೂ ಬದಿಗಳಲ್ಲೂ ವಾಹನಗಳ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಿ ಸಾರ್ವಜನಿಕ ವಾಹನಗಳ ಹಾಗೂ ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಹನ ನಿಲುಗಡೆ ನಿಷೇಧ ಸಂಬಂಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

1. ಮೀನಾಕ್ಷಿ ದೇವಸ್ಥಾನ ಜಂಕ್ಷನ್‌ನಿಂದ ಹುಳಿಮಾವು ಪೊಲೀಸ್ ಠಾಣೆವರೆಗೆ ಬಿ.ಡಿ.ಎ. ಮುಖ್ಯ ರಸ್ತೆಯಲ್ಲಿ ರಸ್ತೆಯ ಎರಡೂ ಬದಿಗಳಲ್ಲಿ ದಿನದ 24 ಗಂಟೆಗಳ ಕಾಲ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

2. ಬನ್ನೇರುಘಟ್ಟ ರಸ್ತೆ ಮತ್ತು ಕೇವ್ ಟೆಂಪಲ್ ರಸ್ತೆಯ ಜಂಕ್ಷನ್‌ನಿಂದ ಬಿ.ಜಿ.ಎಸ್. ಶಾಲೆಯ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ದಿನದ 24 ಗಂಟೆಗಳ ಕಾಲ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:13.05.2011 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ:11.05.2011 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**

ಪಿ.ಆರ್.557

ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:09/ಅ.ಸೂ/ಡಿಸಿಪಿ/ಸಂಪೂ/2011, ದಿನಾಂಕ:28.04.2011**

ಬೆಂಗಳೂರು ನಗರ– ವೈಟ್‌ಫೀಲ್ಡ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ವರ್ತೂರು ಗ್ರಾಮದಲ್ಲಿ ಪ್ರತಿ ಭಾನುವಾರ ಮುಖ್ಯ ರಸ್ತೆ ಬದಿಯಲ್ಲಿ ಸಂತೆ ನಡೆಯುವುದರಿಂದ ಆ ಸಮಯದಲ್ಲಿ ಸದರಿ ರಸ್ತೆಯಲ್ಲಿ ಲಾರಿ ಮತ್ತು ಟ್ರಕ್‌ಗಳು ಸಂಚರಿಸುವುದರಿಂದ ವಾಹನದ ದಟ್ಟಣೆ ಹೆಚ್ಚಾಗಿ ಪದೇ ಪದೇ ಸುಗಮ ಸಂಚಾರ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೆ ಕಾರಣವಾಗಿರುತ್ತೆ. ಸಾರ್ವಜನಿಕ ವಾಹನಗಳ ಹಿತದೃಷ್ಟಿಯಿಂದ ಹಾಗೂ ಸಂಚಾರ ಸುಗಮವಾಗಿ ಸಾಗಲು ಮತ್ತು ಅಪಘಾತಗಳನ್ನು ತಡೆಗಟ್ಟಲು ಪ್ರತಿ ಭಾನುವಾರದಂದು ಸದರಿ ರಸ್ತೆಯಲ್ಲಿ ಬೆಳಿಗ್ಗೆ 8.00 ಗಂಟೆಯಿಂದ ರಾತ್ರಿ 8.00 ಗಂಟೆವರೆಗೆ ಲಾರಿ ಮತ್ತು ಟ್ರಕ್‌ಗಳನ್ನು ತಾತ್ಕಾಲಿಕವಾಗಿ ನಿರ್ಬಂದಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಂಕರ ಬಿದರಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಹನ ನಿಲುಗಡೆ ಮತ್ತು ನಿಷೇಧ ಸಂಬಂಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

"ಪ್ರತಿ ಭಾನುವಾರದಂದು ವರ್ತೂರು ಮುಖ್ಯ ರಸ್ತೆಯಲ್ಲಿ ವರ್ತೂರು ಕೋಡಿಯಿಂದ ಗುಂಜೂರು ಗ್ರಾಮ ಜಂಕ್ಷನ್‌ವರೆಗೆ ರಸ್ತೆಯ ಎರಡೂ ದಿಕ್ಕುಗಳಲ್ಲಿ ಬೆಳಗ್ಗೆ 08.00 ಗಂಟೆಯಿಂದ ರಾತ್ರಿ 08.00 ಗಂಟೆವರೆಗೆ ಲಾರಿ ಮತ್ತು ಟ್ರಕ್‌ಗಳನ್ನು ತಾತ್ಕಾಲಿಕವಾಗಿ ನಿರ್ಬಂದಿಸಲಾಗಿದೆ"

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:30.04.2011 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ:28.04.2011 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಶಂಕರ ಬಿದರಿ**

ಪಿ.ಆರ್.538

ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:04/ಅ.ಸೂ/ಡಿಸಿಪಿ/ಸಂಪೂ/2011, ದಿನಾಂಕ:26.03.2011**

ಬೆಂಗಳೂರು ನಗರ– ಇಂದಿರಾನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಹೆಚ್.ಎ.ಎಲ್. 2ನೇ ಹಂತದ 7ನೇ ಅಡ್ಡ ರಸ್ತೆಯಲ್ಲಿ 12ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 10ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ಸಾರ್ವಜನಿಕರು ರಸ್ತೆಯ ಎರಡೂ ಬದಿಗಳಲ್ಲಿ ತಮ್ಮ ವಾಹನಗಳನ್ನು ನಿಲುಗಡೆ ಮಾಡಿ ಇತರೆ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆ ಹಾಗೂ ಅನಾನುಕೂಲವಾಗುತ್ತಿರುವುದಲ್ಲದೆ ಪದೇ ಪದೇ ಸಂಚಾರ ಸ್ಥಗಿತಗೊಳ್ಳಲು ಹಾಗೂ ಅಪಘಾತಗಳಿಗೆ ಕಾರಣವಾಗಿರುತ್ತೆ. ಸಾರ್ವಜನಿಕ ವಾಹನಗಳ ಹಿತದೃಷ್ಟಿಯಿಂದ ಹಾಗೂ ಸಂಚಾರ ಸುಗಮವಾಗಿ ಸಾಗಲು ಮತ್ತು ಅಪಘಾತಗಳನ್ನು ತಡೆಗಟ್ಟಲು ಈ ರಸ್ತೆಯ ಒಂದು ಬದಿಯಲ್ಲಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿ ಇನ್ನೊಂದು ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಂಕರ ಬಿದರಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಹನ ನಿಲುಗಡೆ ಮತ್ತು ನಿಷೇಧ ಸಂಬಂಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

"ಇಂದಿರಾನಗರ, ಹೆಚ್.ಎ.ಎಲ್ 2ನೇ ಹಂತದ ಉತ್ತರ ದಕ್ಷಿಣವಾಗಿ ಹಾದು ಹೋಗುವ 7ನೇ ಅಡ್ಡರಸ್ತೆಯಲ್ಲಿ 12ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 10ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಪೂರ್ವಕ್ಕೆ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿ ಪಶ್ಚಿಮಕ್ಕೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ".

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:27.03.2011 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ:26.03.2011 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಶಂಕರ ಬಿದರಿ**

ಪಿ.ಆರ್.400

ಪೊಲೀಸ್ ಕಮೀಷನರ್,

ಬೆಂಗಳೂರು ನಗರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

## ತಿದ್ದುಪಡಿ ಅಧಿಸೂಚನೆ

## ನಂ : ಚು (2) ವಿವ 33/2010-11, ದಿನಾಂಕ: 02.05.2011

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಅ.ಸ.ಪತ್ರ ಸಂಖ್ಯೆ ಕೃ.ಮಾ.ಇ 103/ಚುನಾವಣೆ 2009, ದಿ: 2.12.2009, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 2(2), 11(1)(i), ಕಲಂ 11(2) ಮತ್ತು 14(1)(i), ಹಾಗೂ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಾವಳಿಗಳು 1968 ರ ನಿಯಮ 3(1)(2), 5, 5(17)(ಎ) ಮತ್ತು 5ಎ ಪ್ರಕಾರ ಗುಬ್ಬಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕೃಷಿಕ ಮತಕ್ಷೇತ್ರಗಳ ಮತದಾರರ ಪಟ್ಟಿಗಳನ್ನು ಸಮಗ್ರ ಹಾಗೂ ಸಂಕ್ಷಿಪ್ತವಾಗಿ ಪರಿಷ್ಕರಿಸಿ ಚುನಾವಣಾ ಕ್ಷೇತ್ರಗಳ ಪ್ರಾದೇಶಿಕ ವ್ಯಾಪ್ತಿಗಳನ್ನು ನಿರ್ಧರಿಸಿ ನಂ.ಚು(2)ವಿವ 33/10-11 ದಿ:3.3.2011 ರಂದು ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿ ಅಧಿಸೂಚಿಸಲಾಗಿತ್ತು. ತಹಶೀಲ್ದಾರ್, ಗುಬ್ಬಿ ಇವರ ಪತ್ರ ನಂ. ಚು/ವಿವ 5/10-11 ದಿನಾಂಕ 25.3.2011 ರಲ್ಲಿ ಪ್ರಸ್ತಾವನೆ ಪರಿಗಣಿಸಿ, ಕೆಳಕಂಡ ಕೋಷ್ಟಕದ ಅಂಕಣ 1, 2 ಮತ್ತು 3 ರಲ್ಲಿ ಅಧಿಸೂಚಿಸಿರುವುದನ್ನು ಕ್ರಮವಾಗಿ ಅಂಕಣ 4, 5 ಮತ್ತು 6 ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ.

| **ಕ್ರ: ಚುನಾವಣೆ (2) ಸಿಆರ್ 33/10-11 ದಿ: 3.3.2011 ರಲ್ಲಿ ಪ್ರಚುರಪಡಿಸಿರುವುದು** | | | **ಈಗ ತಿದ್ದುಪಡಿ ಮಾಡಿರುವುದು** | | |
|---|---|---|---|---|---|
| **ಕ್ರ.ಸಂ.** | **ಕ್ಷೇತ್ರದ ಹೆಸರು** | **ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ** | **ಕ್ರ.ಸಂ** | **ಕ್ಷೇತ್ರದ ಹೆಸರು** | **ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ** |
| **1** | **2** | **3** | **4** | **5** | **6** |
| 12 | ವ್ಯಾಪಾರಗಾರರ ಚುನಾವಣಾ ಕ್ಷೇತ್ರ | 341. ವ್ಯಾಪಾರಗಾರರಕ್ಷೇತ್ರ | 12 | ವ್ಯಾಪಾರಗಾರರ ಚುನಾವಣಾ ಕ್ಷೇತ್ರ | 341. ವ್ಯಾಪಾರಗಾರರಕ್ಷೇತ್ರ |
| | | 342. ಬೀರಮಾರನಹಳ್ಳಿ | | | ಕೈಬಿಟ್ಟಿದೆ |
| | | 343. ನಾರನಹಳ್ಳಿ | | | ಕೈಬಿಟ್ಟಿದೆ |
| | | 344. ನೆಟ್ಟೇಕೆರೆ | | | ಕೈಬಿಟ್ಟಿದೆ |
| | | 345. ಬೋರಪ್ಪನಹಳ್ಳಿ | | | ಕೈಬಿಟ್ಟಿದೆ |
| | | 346. ಮಣಿಕುಪ್ಪೆ | | | ಕೈಬಿಟ್ಟಿದೆ |
| | | 347. ಚೀಲನಹಳ್ಳಿ | | | ಕೈಬಿಟ್ಟಿದೆ |
| | | 348. ಅಬ್ಬನಕುಪ್ಪೆ | | | ಕೈಬಿಟ್ಟಿದೆ |
| 6 | ನಿಟ್ಟೂರು | – | 6 | ನಿಟ್ಟೂರು | 180ಎ. ತ್ಯಾಗಟೂರು ಅಮಾನಿಕೆರೆ |
| 8 | ಮಾರಶೆಟ್ಟಿಹಳ್ಳಿ | – | 8 | ಮಾರಶೆಟ್ಟಿಹಳ್ಳಿ | 245ಎ. ಚನ್ನವಡೇರಹಳ್ಳಿ |
| 8 | ಮಾರಶೆಟ್ಟಿಹಳ್ಳಿ | – | 8 | ಮಾರಶೆಟ್ಟಿಹಳ್ಳಿ | 253ಎ. ಕೋಡಮಲ್ಲೇನ ಹಳ್ಳಿ |
| 11 | ಮಾವಿನಹಳ್ಳಿ | – | 11 | ಮಾವಿನಹಳ್ಳಿ | 320ಎ. ಮಾವಿನಹಳ್ಳಿ ಅಮಾನಿಕೆರೆ |
| 11 | ಮಾವಿನಹಳ್ಳಿ | – | 11 | ಮಾವಿನಹಳ್ಳಿ | 324ಎ. ಚಂಗಾವಿಕಾವಲ್ |
| 11 | ಮಾವಿನಹಳ್ಳಿ | – | | ಸಿ.ಎಸ್.ಪುರ | 334ಎ. ಸಿ.ಎಸ್.ಪುರ ವಳಗೆರೆ ಕಾವಲ್ |

**ಡಾ: ಸಿ. ಸೋಮಶೇಖರ**

ಜಿಲ್ಲಾಧಿಕಾರಿಗಳು,

ತುಮಕೂರು ಜಿಲ್ಲೆ, ತುಮಕೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ತಿದ್ದುಪಡಿ ಅಧಿಸೂಚನೆ**

**ನಂ : ಚು (2) ವಿವ 33/2010–11, ದಿನಾಂಕ: 02.05.2011**

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಅ.ಸ.ಪತ್ರ ಸಂಖ್ಯೆ ಕೃ.ಮಾ.ಇ 103/ಚುನಾವಣೆ 2009, ದಿ: 2.12.2009, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 2(2), 11(1)(i), ಕಲಂ 11(2) ಮತ್ತು 14(1)(i), ಹಾಗೂ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಾವಳಿಗಳು 1968 ರ ನಿಯಮ 3(1)(2), 5, 5(17)(ಎ) ಮತ್ತು 5ಎ ಪ್ರಕಾರ ಕುಣಿಗಲ್ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕೃಷಿಕ ಮತಕ್ಷೇತ್ರಗಳ ಮತದಾರರ ಪಟ್ಟಿಗಳನ್ನು ಸಮಗ್ರ ಹಾಗೂ ಸಂಕ್ಷಿಪ್ತವಾಗಿ ಪರಿಷ್ಕರಿಸಿ ಚುನಾವಣಾ ಕ್ಷೇತ್ರಗಳ ಪ್ರಾದೇಶಿಕ ವ್ಯಾಪ್ತಿಗಳನ್ನು ನಿರ್ಧರಿಸಿ ನಂ.ಚು(2)ವಿವ 33/10–11 ದಿ:3.3.2011 ರಂದು ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿ ಅಧಿಸೂಚಿಸಲಾಗಿತ್ತು. ತಹಶೀಲ್ದಾರ್, ಕುಣಿಗಲ್ ಇವರ ಪತ್ರ ನಂ. ಚು/ವಿವ 5/11–12 ದಿನಾಂಕ 30.4.2011 ರಲ್ಲಿಯ ಪ್ರಸ್ತಾವನೆ ಪರಿಗಣಿಸಿ, ಕೆಳಕಂಡ ಕೋಷ್ಟಕದ ಅಂಕಣ 1, 2 ಮತ್ತು 3 ರಲ್ಲಿ ಅಧಿಸೂಚಿಸಿರುವುದನ್ನು ಕ್ರಮವಾಗಿ ಅಂಕಣ 4, 5 ಮತ್ತು 6 ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ.

| ಕ್ರ: ಚುನಾವಣೆ (2) ಸಿಆರ್ 33/10–11 ದಿ: 3.3.2011 ರಲ್ಲಿ ಪ್ರಚುರಪಡಿಸಿರುವುದು | | | ಈಗ ತಿದ್ದುಪಡಿ ಮಾಡಿರುವುದು | | |
|---|---|---|---|---|---|
| ಕ್ರಸಂ | ಕ್ಷೇತ್ರದ ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | ಕ್ರಸಂ | ಕ್ಷೇತ್ರದ ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ |
| 1 | 2 | 3 | 4 | 5 | 6 |
| 2 | 2–ಬೋರಲಿಂಗನ ಪಾಳ್ಯ | 56. ತರೀಕೆರೆ<br>57. ಬೋರಸಂದ್ರ<br>58. ದಾಸನಪುರ | 2 | 3–ಸಂತೆ ಮಾವತ್ತೂರು | 56. ತರೀಕೆರೆ<br>57. ಬೋರಸಂದ್ರ<br>58. ದಾಸನಪುರ |
| 10 | 10–ಯಡಿಯೂರು | 275. ಜಿಡ್ಡಿಗೆರೆ<br>276. ಹೆಡ್ಡಿಗೆರೆ<br>277. ವಗರಗೆರೆ<br>278. ಚೊಟ್ನಹಳ್ಳಿ<br>279. ಕೆ. ಹಂಪಾಪುರ<br>280. ಕೋಟೆಕೆರೆ<br>281. ಶೆಟ್ಟಿಬೀಡು<br>282. ಗುನ್ನಾಗೆರೆ<br>283. ಮಡಿಕೆಕನ್ನಸಂದ್ರ<br>284. ಬೊಮ್ಮಡಿಗೆರೆ<br>285. ಮಾದಿಹಳ್ಳಿ<br>286. ದಾಸನಪುರ | 11 | 11–ನಾಗಸಂದ್ರ | 275. ಜಿಡ್ಡಿಗೆರೆ<br>276. ಹೆಡ್ಡಿಗೆರೆ<br>277. ವಗರಗೆರೆ<br>278. ಚೊಟ್ನಹಳ್ಳಿ<br>279. ಕೆ. ಹಂಪಾಪುರ<br>280. ಕೋಟೆಕೆರೆ<br>281. ಶೆಟ್ಟಿಬೀಡು<br>282. ಗುನ್ನಾಗೆರೆ<br>283. ಮಡಿಕೆಕನ್ನಸಂದ್ರ<br>284. ಬೊಮ್ಮಡಿಗೆರೆ<br>285. ಮಾದಿಹಳ್ಳಿ<br>286. ದಾಸನಪುರ |
| 1 | 1–ಕೊತ್ತಗೆರೆ | – | 1 | 1–ಕೊತ್ತಗೆರೆ | 30ಎ. ನೀಲತ್ತಹಳ್ಳಿ ಅಣೆ |
| 7 | 7–ಹುಲಿಯೂರು ದುರ್ಗ | – | 7 | 7–ಹುಲಿಯೂರು ದುರ್ಗ | 166ಎ. ಶೃಂಗಾರ ಸಾಗರ<br>166ಬಿ. ಸೊನ್ನಾಯ್ಯನಹಳ್ಳಿ |

**ಡಾ: ಸಿ. ಸೋಮಶೇಖರ**
ಜಿಲ್ಲಾಧಿಕಾರಿಗಳು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.529

**KARNATAKA ELECTRICITY REGULATORY COMMISSION**

**NOTIFICATION No.Y/01/10, Dated:1st April, 2011**

In exercise of the powers conferred under Regulation 2(1) (I) of the Karnataka Electricity Regulatory Commission (Procurement of Energy From Renewable Sources) Regulations, 2011, the Karnataka Electricity Regulatory Commission hereby designates the State Load Dispatch Center (SLDC) situated at # 28, Race Course Cross Road, Bangalore-560 001, as the State Agency for the purpose of carrying out the functions specified in the said Regulations.

The Notification No.Y/01/10 Dated:25th March, 2011 stands withdrawn.

PD-71

**Secretary**

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

## ಆಯುಕ್ತರು ಹಾಗೂ ಜಿಲ್ಲಾ ಚುನಾವಣಾಧಿಕಾರಿರವರ ಕಛೇರಿ, ಮಹಾನಗರ ಪಾಲಿಕೆ ಕಛೇರಿಗಳ ಸಂಕೀರ್ಣ, ಎನ್.ಆರ್.ಚೌಕ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಆ/ಜಿ.ಚು./ಪಿಆರ್/41/11–12, ದಿನಾಂಕ:26.05.2011**

**ವಿಷಯ:** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ದಕ್ಷಿಣ ವಲಯದ 171–ಪದ್ಮನಾಭನಗರ ವಿಧಾನಸಭಾ ಕ್ಷೇತ್ರದ ವಾರ್ಡ್ ಸಂಖ್ಯೆ 180ರ ಉಪ ಚುನಾವಣೆಯ ಸಲುವಾಗಿ ಚುನಾವಣಾಧಿಕಾರಿಯಾಗಿ ಹಾಗೂ ಸಹಾಯಕ ಚುನಾವಣಾಧಿಕಾರಿಯಾಗಿ ನೇಮಕ ಮಾಡುವ ಬಗ್ಗೆ.

ಕರ್ನಾಟಕ ನಗರ ಪಾಲಿಕೆ (ಚುನಾವಣೆ) ನಿಯಮಗಳು 1979 ನಿಯಮ 4ರ ಮೇರೆಗೆ ಆಯುಕ್ತರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಾದ ಶ್ರೀ ಸಿದ್ದಯ್ಯ, ಭಾ.ಆ.ಸೇ. ಆದ ನಾನು ರಾಜ್ಯ ಚುನಾವಣಾ ಆಯೋಗ ನಿಗದಿಪಡಿಸಿರುವ ಕಾರ್ಯಕ್ರಮದಂತೆ ಉಪ ಚುನಾವಣೆ ನಡೆಸಲು ಕ್ರಮವಾಗಿ ಚುನಾವಣಾಧಿಕಾರಿ ಹಾಗೂ ಸಹಾಯಕ ಚುನಾವಣಾಧಿಕಾರಿಗಳೆಂದು ಈ ಕೆಳಕಂಡ ಅಧಿಕಾರಿಗಳನ್ನು ನೇಮಿಸಿರುತ್ತೇನೆ.

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಹೆಸರು ಮತ್ತು ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಹೆಸರು ಮತ್ತು ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡಿನ ಸಂಖ್ಯೆ ಮತ್ತು ಹೆಸರು |
|---|---|---|---|---|
| 1. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಶ್ರೀ ಅವಿನಾಶ್ ಬಾಬು ಕಂದಾಯ ಅಧಿಕಾರಿ ಹಾಗೂ ಮತದಾರರ ಪಟ್ಟಿ ನೋಂದಣಾಧಿಕಾರಿಗಳು | ಶ್ರೀ ಜಿ.ಶ್ರೀನಿವಾಸು, ಸಹಾಯಕ ಕಂದಾಯ ಅಧಿಕಾರಿ ಹಾಗೂ ಸಹಾಯಕ ಮತದಾರರಪಟ್ಟಿ ನೋಂದಣಾಧಿಕಾರಿ | ನಂ.180– ಬನಶಂಕರಿ ದೇವಸ್ಥಾನ |

ಆಯುಕ್ತರು ಹಾಗೂ ಜಿಲ್ಲಾ
ಚುನಾವಣಾಧಿಕಾರಿಗಳು ಬೃಹತ್ ಬೆಂಗಳೂರು
ಮಹಾನಗರ ಪಾಲಿಕೆ, ಬೆಂಗಳೂರು.

ಪಿಡಿ–72

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ/70/ಡಿಟಿಸಿಆರ್/2009-10 ದಿನಾಂಕ:30-11-2010**

**ಉಪಸ್ಥಿತರು:** ಬಿ.ವಿ.ಹೂವಪ್ಪ ಗೌಡ,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಮಹಿಳಾ ಮುಖ್ಯ ಅರಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ ಬಂದರು,ಮಂಗಳೂರು.

**ಆರೋಪಿ:**

ಅಶೋಕ ಸಾಲಿಯಾನ್,ಬಿನ್:ದಿ:ಜೆ.ಜನಾರ್ಧನ ವಾಸ:ಕುರಪಡ್ಪು ಮನೆ, ಕಣ್ಣೂರು ಗ್ರಾಮ, ಪಡೀಲ್ ಅಂಚೆ, ಮಂಗಳೂರು ತಾಲೂಕು.

**ವಾಹನದ ಮಾಲೀಕರು**

ದಿ:ಮ್ಯಾನೇಜಿಂಗ್ ಪಾರ್ಟನರ್, ಫಾರ್ ಇಸ್ಟ್ ಏಜೆನ್ಸಿಸ್, ಕುಲಾಸೋ ಆಸ್ಪತ್ರೆಯ ಎದುರು, ಲೋವರ್ ಬೆಂದೂರು,ಮಂಗಳೂರು

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಮಂಗಳೂರು ವಿಶೇಷ ಪೊಲೀಸ್ ಠಾಣೆಯ ಮಹಿಳಾ ಹೆಚ್.ಸಿ.ನಂ: 817 ಶ್ರೀಮತಿ. ಕಮಲರವರು ಪೊಲೀಸ್ ನಿರೀಕ್ಷಕರ ಆದೇಶದಂತೆ ದಿನಾಂಕ:5-9-2009 ರಂದು ತಮ್ಮ ಸಿಬ್ಬಂದಿಯವರೊಂದಿಗೆ ಕಂಕನಾಡಿ ರೈಲ್ವೆ ಸ್ಟೇಷನ್ ವಠಾರದಲ್ಲಿ ಗಸ್ತು ಸಂಚರಿಸುತ್ತಿರುವಾಗ, ಮಾಹಿತಿಯನ್ನು ಅನುಸರಿಸಿ ಕಂಕನಾಡಿ ರೈಲ್ವೆ ಸ್ಟೇಷನ್ ತಲುಪಿ ರೈಲ್ವೆ ನಿಲ್ದಾಣ ದಲ್ಲಿ ಸಿಬ್ಬಂಧಿಯವರಿಗೆ ಅಕ್ರಮ ಮದ್ಯ ಸಾಗಾಟದ ಬಗ್ಗೆ ಬಂದಿರುವ ಮಾಹಿತಿಯ ಬಗ್ಗೆ ತಿಳುವಳಿಕೆ ನೀಡಿ, ರೈಲ್ವೆ ಪ್ಲಾಟ್ ಫಾರಂ ಹಾಗೂ ಆಸುಪಾಸಿನ ಸ್ಥಳಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಗೋವಾದಿಂದ ಕೇರಳ ರಾಜ್ಯಕ್ಕೆ ಹೋಗುವ ರೈಲು ನಿಲ್ದಾಣದಲ್ಲಿ ಬಂದು ನಿಂತಾಗ ಆ ರೈಲಿನಿಂದ ಒರ್ವ ವ್ಯಕ್ತಿ ಕೈಯಲ್ಲಿ ಬಿಳಿ ಪಾಲಿಥೀನ್ ಚೀಲ ಹಿಡಿದುಕೊಂಡು ಇಳಿದು ರೈಲ್ವೆ ನಿಲ್ದಾಣದಿಂದ ಹೊರಗೆ ಬಂದು ಆತನಿಗೆ ಸೇರಿದ KA-19-L-2558 ನಂಬರಿನ ಕೈನೆಟಿಕ್ ಮೋಟಾರ್ ಸೈಕಲ್‌ನಲ್ಲಿ ತಾನು ತಂದಿರುವ ಬಿಳಿ ಪಾಲಿಥೀನ್ ಚೀಲವನ್ನು ಇಟ್ಟುಕೊಂಡು ಹೋಗಲು ಅಣಿಯಾಗುತ್ತಿರುವುದು ಕಂಡು ಸಂಶಯದಿಂದ ಆತನನ್ನು ಸುತ್ತುವರಿದು, ಚೀಲವನ್ನು ಪರಿಶೀಲಿಸಿದಾಗ ಅದರಲ್ಲಿ 750 ಎಂ ಎಲ್ ನ Oxford Prestige club whisky ಎಂಬ ಹೆಸರಿರುವ ಮದ್ಯ ತುಂಬಿರುವ 12 ಬಾಟಲಿಗಳಿದ್ದು, ಇದು ಅಕ್ರಮ ಗೋವಾ ಮದ್ಯ ಸಾಗಾಟವೆಂದು ಖಚಿತ ಪಡಿಸಿಕೊಂಡು, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 32,34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಮದ್ಯ ತುಂಬಿದ 12 ಬಾಟಲಿಗಳಿಂದ ಒಂದು ಬಾಟಲಿ ಯನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ವಾಹನ ಸಮೇತ ಮದ್ಯವನ್ನು ಜಪ್ತುಪಡಿಸಿಕೊಂಡು ಮಹಜರು ಕ್ರಮ ಜರುಗಿಸಿ

ಪೊಲೀಸ್ ನಿರೀಕ್ಷಕರಿಗೆ ಮುಂದಿನ ಕಾನೂನು ಕ್ರಮ ಕೈಗೊಳ್ಳುವಂತೆ ಕೋರಿಕೊಂಡ ಮೇರೆಗೆ ಆರೋಪಿ ಯಾದ ಅಶೋಕ ಸಾಲಿಯಾನ್ ಬಿನ್: ದಿ:ಜೆ. ಜನಾರ್ಧನ , ಕುರುಪಡ್ಪು ಮನೆ, ಕಣ್ಣೂರು ಗ್ರಾಮ, ಪಡೀಲ್ ಅಂಚೆ, ಮಂಗಳೂರು ತಾಲೂಕು ಇವರ ವಿರುದ್ದ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ವಿಶೇಷ ಪೊಲೀಸ್ ಠಾಣಾ ಕ್ರೈಂ ಸಂ:8/2009 ದಿ:5-9-2009ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ ಹಾಗೂ ದಾಖಲಾತಿ ಗಳನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ದಿ:14-9-2009ರಂದು ಪೊಲೀಸ್ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣಾ, ಬಂದರು, ಮಂಗಳೂರು ಇವರು ದಿನಾಂಕ:14-9-2009ರಂದು ವಶಪಡಿಸಿಕೊಂಡ ವಾಹನ ಹಾಗೂ ಸೊತ್ತುಗಳನ್ನು ಇಲಾಖಾ ವಶಕ್ಕೆ ಹಸ್ತಾಂತರಿಸಲು ಈ ಪ್ರಾಧಿಕಾರದ ಅನುಮತಿ ಕೋರಿದ ಮೇರೆಗೆ ಪ್ರಾಧಿಕಾರದ ದಿ:25-9-2009ರ ಅದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-2 ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು,ಮಂಗಳೂರು ದಕ್ಷಿಣ ವಲಯ-2 ಇವರ ಪತ್ರ ಸಂಖ್ಯೆ:ಇ ಎಕ್ಸ್ಇ: ಎ ೦ ಎ ಸ್ಆರ್-2:ಪೋ.ಕ್ರೈಂ 23/2009-10 ದಿ:28-1-2010ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿ ಕೊಂಡ ಈ ಕೆಳಗಿನ ಸೊತ್ತುಗಳನ್ನು ದಿ:18-11-2009ರಂದು ಪೊಲೀಸ್ ಅಧಿಕಾರಿಗಳಿಂದ ಸ್ವೀಕರಿಸಿ ಕೊಂಡಿರುವ ಬಗ್ಗೆ ವರದಿಸಿರುತ್ತಾರೆ.

1) ಕೈನೆಟಿಕ್ ಹೊಂಡಾ ಸ್ಕೂಟರ್ ಸಂ: KA-19-L-2558
2) 750 ಎಂಎಲ್‌ನ Oxford Prestige club whisky ಎಂಬ ಮದ್ಯ ತುಂಬಿರುವ 12 ಬಾಟಲಿ ಗಳಲ್ಲಿ ಒಟ್ಟು-9.000 ಲೀಟರು ಮದ್ಯ (750 ಎಂ ಎ ಲ್ ನ 1 ಬಾಟಲಿ ಮದ್ಯವನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-2 ಇವರ ತನಿಖಾ ವರದಿ ಸಂಖ್ಯೆ: ಎ ೦ಎ ಸ್ಆರ್-2:ಪೋ.ಕ್ರೈಂ 23/2009-10, ದಿ:4-11-2010ರ ವರದಿಯೊಂದಿಗೆ ಲಗತ್ತಿಸಲಾದ ಪೊಲೀಸ್ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣಾ , ಬಂದರು, ಮಂಗಳೂರು ಇವರು ಕರ್ನಾಟಕ ಸರ್ಕಾರದ ರಾಸಾಯನ ಶಾಸ್ತ್ರಜ್ಞ/ಸಹಾಯಕ ರಾಸಾಯನ ವಿಶ್ಲೇಷಕರು, ಚಿಕ್ಕಮಗಳೂರು ಇವರಿಂದ ಪಡೆದು ಸಲ್ಲಿಸಿದ್ದ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಹೆಚ್.ಇ.ಎಕ್ಸ್ ನಂ:07-1 ದಿ: 5-2-2010ರಲ್ಲಿ ಮದ್ಯದಲ್ಲಿ ಮದ್ಯಸಾರದ ಪ್ರಮಾಣ ಶೇ.42.9 ಇರುವುದಾಗಿ ದೃಢೀಕರಿಸಿರುತ್ತಾರೆ. ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ವರದಿಯನ್ನು ಕೂಡಾ ಪೊಲೀಸ್ ಉಪ ನಿರೀಕ್ಷಕರವರೇ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ ಜಿಲ್ಲೆ,ಮಂಗಳೂರು ಇವರಿಂದ ಪಡೆದು ತನಿಖಾಧಿಕಾರಿಯವರಿಗೆ ಒಪ್ಪಿಸಿದ್ದು, ಸದ್ರಿ ಬಿ ವರದಿಯ ಪ್ರತಿಯನ್ನು ತನಿಖಾ ವರದಿಯೊಂದಿಗೆ ಈ ಪ್ರಾದಿಕಾರಕ್ಕೆ ಸಲ್ಲಿಸಿರುತ್ತಾರೆ.ಹಾಗೂ ಈ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆಯಲಾದ ಬಿ ರಿಜಿಸ್ಟ್ರಾರ್ ವರದಿಯಲ್ಲಿ Managing Partner, M/s Far East Agency , Opp Calaco Hospital, Lower Bendor, Mangalore ಇವರು ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ದೃಢೀಕೃತವಾಗಿರುವುದರಿಂದ ,ಸದ್ರಿ ವಾಹನದ ನೊಂದಣಿ ಮಾಲೀಕರಿಗೆ ಈ ಪ್ರಾದಿಕಾರದಿಂದ ದಿ:24-4-2010 ರಂದು ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಬಾರದು ? ಎ ೦ಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸು ನೊಂದಾಯಿತ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ದಿ:30-4-2010 ರಂದು ನೊಂದಾಣಿ ಮಾಲೀಕರಿಗೆ ಜಾರಿಯಾಗಿದ್ದರೂ ,ಸದ್ರಿಯವರಿಂದ ಯಾವುದೇ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-2 ಇವರ ತನಿಖಾ ವರದಿ ಯನ್ನು ಆಧರಿಸಿ, ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/70/ಡಿಟಿಸಿಆರ್/2009–10 ದಿ:10–11–2010ರ ಆದೇಶದಲ್ಲಿ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳ ಪೈಕಿ ವಾಹನವನ್ನು ಹೊರತುಪಡಿಸಿ ಉಳಿದ ಮದ್ಯ (ಮಾದರಿಗಳನ್ನು ಹೊರತುಪಡಿಸಿ) ವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪ್ರಸ್ತುತ ಜಾರಿಯಲ್ಲಿರುವ ಸರ್ಕಾರದ ಅದೇಶದಂತೆ ಮದ್ಯವನ್ನು ನಾಶಪಡಿಸಲಾಗಿರುತ್ತದೆ.

ವಾಹನವನ್ನು ದಿ:5–9–2009ರಂದು ವಶಪಡಿಸಿಕೊಂಡು ಈಗಾಗಲೇ 1 ವರ್ಷ 2 ತಿಂಗಳು ಕಳೆದರೂ, ಪ್ರಕರಣದಲ್ಲಿ ದಸ್ತಗಿರಿಯಾದ ಆರೋಪಿಗಳಾಗಲೀ, ವಾಹನದ್ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ವಾಹನದ ಬಿಡುಗಡೆಗಾಗಿ ಅರ್ಜಿ ಯನ್ನು ಸಲ್ಲಿಸಿರುವುದಿಲ್ಲ. ಜಪ್ತು ಸಂದರ್ಭದಲ್ಲಿ ವಾಹನದಲ್ಲಿ ಅಕ್ರಮವಾಗಿ ಗೋವಾ ನಿರ್ಮಿತ ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ವಾಹನ ವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾದಿಕಾರವು ಮನಗಂಡು ಮುಟ್ಟುಗೋಲು ನಡವಳಿಯನ್ನು ಪ್ರಾರಂಭಿಸಲಾಗಿರುತ್ತದೆ.

ಮುಟ್ಟುಗೋಲು ನಡವಳಿ ಪ್ರಯುಕ್ತ ವಿಚಾರಣೆಯನ್ನು ಆರಂಭಿಸಿ, ಈ ಕೆಳಗಿನಂತೆ ವಿವಾದಾಂಶಗಳ ಉತ್ತರ ಪಡೆಯಲಾಗಿರುತ್ತದೆ.

1) ಮೊದಲನೇ ವಿವಾದಾಂಶ: ದಿ: 5-9-2009 ರಂದು ವಾಹನ ಸಂ: KA-19-L-2558 ಕೈನೆಟಿಕ್ ಹೊಂಡಾ ಸ್ಕೂಟರ್‌ನಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತು ಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರಾದ ಶ್ರೀಮತಿ.ಕಮಲ, ಮಹಿಳಾ ಹೆಡ್ ಕಾನ್ಸ್‌ಟೇಬಲ್,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ,ಬಂದರು ಮಂಗಳೂರು ಇವರು ದಿ:23-11-2010ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನೀಡುತ್ತಾ, ತಾನು ಜುಲೈ 2009ರಿಂದ ಇಲ್ಲಿಯತನಕ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಮಂಗಳೂರು ಇಲ್ಲಿ ಮಹಿಳಾ ಹೆಡ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:5-9-2009ರಂದು ಠಾಣೆಯ ಪೊಲೀಸ್ ನಿರೀಕ್ಷಕರಾದ ಶ್ರೀ.ಬಿ.ಜಿ ಆಚಾರ್‌ರವರ ಆದೇಶದಂತೆ ಸಿಬ್ಬಂದಿಗಳಾದ ಪಿ.ಸಿ . ನಂ:999 ಶ್ರೀ.ಲೋಕನಾಥ್, ಪಿ.ಸಿ 1045 ಸುದರ್ಶನ್ , ಪಿ.ಸಿ ನಂ:1005 ಶ್ರೀ.ದೀಪಕ್ ರವರೊಂದಿಗೆ ಇಲಾಖಾ ಜೀಪಿನಲ್ಲಿ ಮಂಗಳೂರು ತಾಲೂಕಿನ ಕಂಕನಾಡಿ ರೈಲ್ವೆ ಸ್ಟೇಷನ್‌ನ ವಠಾರದಲ್ಲಿ ಗಸ್ತು ಸಂಚರಿಸಿಕೊಂಡು ಬೆಳಿಗ್ಗೆ ಸುಮಾರು 9-00 ಗಂಟೆಗೆ ಮಂಗಳೂರು ಕಂಕನಾಡಿ ರೈಲ್ವೆ ನಿಲ್ದಾಣ ತಲುಪಿ ಅಕ್ರಮ ಮದ್ಯ ಸಾಗಾಟದ ಬಗ್ಗೆ ಸಿಬ್ಬಂದಿಯವರಿಗೆ ಸೂಕ್ತ ತಿಳುವಳಿಕೆ ನೀಡಿ ರೈಲ್ವೆ ಪ್ಲಾರ್ಟ್‌ಫಾರಂ ಹಾಗೂ ಅಸು ಪಾಸಿನ ಸ್ಥಳಗಳಲ್ಲಿ ನಿಗಾ ಇಡಲು ಸೂಚಿಸಲಾಗಿ ಗೋವಾ ಕಡೆಯಿಂದ ಕೇರಳ ರಾಜ್ಯಕ್ಕೆ ಹೋಗುವ ರೈಲಿನಿಂದ ಒಬ್ಬ ವ್ಯಕ್ತಿಯು ಇಳಿದು ಕೈಯಲ್ಲಿ ಒಂದು ಬಿಳಿ ಪಾಲಿಥೀನ್ ಚೀಲ ಹಿಡಿದುಕೊಂಡು ರೈಲ್ವೆ ಸ್ಟೇಷನ್‌ನಿಂದ ಹೊರಗೆ ಬಂದು ,ಆತನ ವಶದಲ್ಲಿದ್ದ ಕೆ ಎ-19-ಎಲ್-2558 ನಂಬರಿನ ಕೈನೆಟಿಕ್ ಹೊಂಡಾ ದ್ವಿಚಕ್ರ ವಾಹನದಲ್ಲಿ ಚೀಲವನ್ನು ಇಡುವ ಸಮಯ ಸಂಶಯಗೊಂಡು ಸಿಬ್ಬಂಧಿಯವರನ್ನು ಹಾಗೂ ಪಂಚರನ್ನು ಕರೆದುಕೊಂಡು ಸುತ್ತುವರಿದ್ದು ಅನುಮಾನದ ಮೇರೆಗೆ ಆ ಚೀಲದೊಳಗೆ ಏನಿದೆ ಎಂದು ನಿಲ್ಲಿಸಿ ವಿಚಾರಣೆ ಮಾಡಿದಾಗ ಆತನು ತನ್ನ ಹೆಸರು ಆಶೋಕ ಸಾಲಿಯಾನ , 42 ವರ್ಷ ದಿ: ಕೆ.ಜನಾರ್ಧನ , ವಾಸ: ಕುರಪಡ್ಪು ಮನೆ, ಪಡೀಲ್ ಮಂಗಳೂರು ಎಂದು ತಿಳಿಸಿದನು. ಅನುಮಾನದ ಮೇರೆಗೆ ಅತನ ಕೈಯಲ್ಲಿದ್ದ ಚೀಲವನ್ನು ನೋಡಲಾಗಿ ಅದರೊಳಗೆ ಮದ್ಯ ತುಂಬಿದ 12 ಬಾಟಲಿಗಳು ಕಂಡು ಬಂದು ಇದನ್ನು ಸಾಗಿಸುವರೇ ಪರವಾನಿಗೆ ಇದೆಯೆ ಎಂದು ಕೇಳಲಾಗಿ ಇಲ್ಲವೆಂದು ತಿಳಿಸಿದನು. ಈ ಮದ್ಯವನ್ನು ಪಂಚರ ಸಮಕ್ಷಮ ಪರಿಶೀಲಿಸಲಾಗಿ 750 ಎಂಎಲ್‌ನ ಪರಿಮಾಣದ Oxford Club Prestage Whisky ಎಂದು ಹೆಸರು ಇರುವ ಮದ್ಯ ತುಂಬಿದ 12 ಬಾಟಲಿಗಳ ಮೇಲೆ K.S.R.Enterprises Limited, For Sale in Goa Only ಎಂದು ನಮೂದಿಸಲಾಗಿತ್ತು. 750 ಎಂ ಎಲ್ ನ 12 ಬಾಟಲಿಗಳಿಂದ 1 ಬಾಟಲಿ ಮದ್ಯವನ್ನು ಮಾದರಿಗಾಗಿ ತೆಗೆದು ಇದರ ಮುಚ್ಚಳಕ್ಕೆ ಬಿಳಿ ಬಟ್ಟೆಯನ್ನು ಸುತ್ತಿ E& L DK ಅಂತ ಅರಗು ಸೀಲು ಮಾಡಿ ಪಂಚರ ಹಾಗೂ ತನ್ನ ಸಹಿಯುಳ್ಳ ಚೀಟಿಯನ್ನು ಅಂಟಿಸಿ, ಆ ಬಾಟಲಿಗೆ ಎ-1 ಗುರುತಿಸಲಾಯಿತು. ಉಳಿದ 11 ಬಾಟಲಿಗಳನ್ನು ಪಾಲಿಥೀನ್ ಚೀಲದ ಸಮೇತ ಒಂದು ಚೀಲದೊಳಗೆ ಹಾಕಿ ದಾರದಿಂದ ಸುತ್ತಿ E& L DK ಅಂತ ಅರಗು ಸೀಲು ಮಾಡಿ ಪಂಚರ ಹಾಗೂ ತನ್ನ ಸಹಿಯುಳ್ಳ ಲೇಬಲ್ ಅಂಟಿಸಿ ಎ-2 ಎಂದು ಗುರುತಿಸಲಾಯಿತು. ಅದೇ ರೀತಿ ಆರೋಪಿಯ ಕೈನೆಟಿಕ್ ಸ್ಕೂಟರ್ ಪರಿಶೀಲಿಸಲಾಗಿ ಇದರ ನೊಂದಣಿ ಸಂ: KA-19-L-2558 ಆಗಿದ್ದು ವಾಹನದ ಬಗ್ಗೆ ಯಾವುದೇ ದಾಖಲೆಗಳು ಇಲ್ಲವೆಂದು ತಿಳಿಸಿರುತ್ತಾರೆ. ಮುಂದಿನ ಕ್ರಮದ ಬಗ್ಗೆ 750 ಎಂಎಲ್‌ನ 12 ಬಾಟಲಿಗಳು ಮತ್ತು ಕೈನೆಟಿಕ್ ಹೊಂಡಾ ಸ್ಕೂಟರನ್ನು ಹಾಗೂ ಅಶೋಕ ಸಾಲಿಯಾನ್‌ನ್ನು ವಶಕ್ಕೆ ಪಡೆದು ಈ ಮಹಜರನ್ನು ಬೆಳಿಗ್ಗೆ 9-15 ಗಂಟೆಯಿಂದ 10-30 ಗಂಟೆಯವರೆಗೆ ಸ್ಥಳದಲ್ಲಿಯೇ ಬರೆದು ನಂತರ ಸಿಬ್ಬಂಧಿಯವರ ಹಾಗೂ ಪಂಚರ ಸಹಿಯನ್ನು ಪಡೆದು ಸೊತ್ತುಗಳನ್ನು ಅರೋಪಿಯೊಂದಿಗೆ ಠಾಣೆಗೆ ತಂದು ಪೂರ್ವಾಹ್ನ 11-30 ಗಂಟೆಗೆ ವರದಿ ಯೊಂದಿಗೆ ಪೊಲೀಸ್ ನಿರೀಕ್ಷಕರಿಗೆ ಕಾನೂನು ಕ್ರಮ ಕೈಗೊಳ್ಳಲು ಕೋರಲಾಯಿತು. ಮಹಜರು ಹಾಗೂ ತಾನು ನೀಡಿದ್ದ ವರದಿಯಂತೆ ಅರೋಪಿಯ ವಿರುದ್ದ ಮೊಕದ್ದಮೆ ಸಂ: 8/2009 ದಿ:5-9-2009 ರಂತೆ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ, ಸೊತ್ತುಗಳ ಪಟ್ಟಿಯೊಂದಿಗೆ ಮಾನ್ಯ ಜೆ.ಎಂ.ಎಫ್ .ಸಿ 3ನೇ ನ್ಯಾಯಾಲಯಕ್ಕೆ ಅರೋಪಿಯನ್ನು ಹಾಜರುಪಡಿಸಲಾಗಿದೆ. ಮೂಲ ಮಹಜರಿನ ಪ್ರತಿ, ಪ್ರ.ಮಾ.ವರದಿ ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲಾಗಿದ್ದು,ಮಹಜರಿನ ಪ್ರತಿಯನ್ನು ನೋಡಲಾಗಿ ಅದನ್ನು ನಿಶಾನೆ ಪಿ-1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ-1 ಎ ಎಂದು ಗುರುತಿಸಲಾಯಿತು. ಪ್ರ.ಮಾ.ವರದಿಯನ್ನು ನಿಶಾನೆ ಪಿ-2 ಎಂದು, ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು ಎಂದು ಸಾಕ್ಷಿನುಡಿದಿರುತ್ತಾರೆ.

ಪಾಟೀ ಸವಾಲು: ಜಪ್ತು ಪಡಿಸಿಕೊಂಡ ವಾಹನದ ಮಾಲೀಕರಾಗಲೀ ,ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ:2**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಎಂ.ಕೇಶವಮೂರ್ತಿ, ಅಬಕಾರಿ ನಿರೀಕ್ಷಕ,ಮಂಗಳೂರು ದಕ್ಷಿಣ ವಲಯ-2 ಇವರು ದಿ: 30-11-2010ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನೀಡುತ್ತಾ, ತಾನು ಅಕ್ಟೋಬರ್-2009ರಿಂದ ಈತನಕ ಅಬಕಾರಿ ನಿರೀಕ್ಷಕರ ಕಚೇರಿ, ಮಂಗಳೂರು ದಕ್ಷಿಣ ವಲಯ-2 ಇಲ್ಲಿ ಅಬಕಾರಿ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ.ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಜ್ ದ.ಕ ಜಿಲ್ಲೆ ಮಂಗಳೂರು ಇವರ ದಿ:25-9-2009ರ ಅದೇಶದಂತೆ ಈ ಪ್ರಕರಣದ ದಾಖಲೆಗಳು ಮತ್ತು ಸೊತ್ತುಗಳನ್ನು ದಿ:18-11-2010 ರಂದು ತನ್ನ ಸುಪರ್ಧಿಗೆ ಹಸ್ತಾಂತರ ಪಡೆದುಕೊಂಡಿರುತ್ತೆನೆ. ಸದ್ರಿ ಪ್ರಕರಣದಲ್ಲಿ 750 ಎಂಎಲ್‌ನ Oxford Club prestige Whisk 12 ಬಾಟಲಿಗಳಲ್ಲಿ ಒಟ್ಟು 9.000 ಲೀಟರು ಮದ್ಯ ಇದ್ದು, ಅದರಿಂದ 750 ಎಂಎಲ್‌ನ 1 ಬಾಟಲಿಯನ್ನು ರಾಸಾಯನಿಕ

ಪರೀಕ್ಷೆಗೆ ಮಾದರಿ ತೆಗೆದಿದ್ದು, ಸದ್ರಿ ಮಾದರಿಯನ್ನು ಪೊಲೀಸ್ ಇಲಾಖೆಯಿಂದಲೇ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲ್ಪಟ್ಟಿದ್ದು,ಪ್ರಕರಣದ ದಾಖಲೆಗಳ ಜೊತೆಗೆ ರಾಸಾಯನಿಕ ವಿಶ್ಲೇಷಣೆಯ ವರದಿಯ ಪ್ರತಿಯನ್ನು ಪಡೆದುಕೊಂಡಿರುತ್ತೇನೆ. ಸದ್ರಿ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಈಗ ನೋಡಿ ಅದನ್ನು ನಿಶಾನೆ ಪಿ-4 ಎಂದು , ಛಾಯಾ ಪ್ರತಿಯ ದೃಡೀಕೃತ ತನ್ನ ಸಹಿಯನ್ನು ನಿಶಾನೆ ಪಿ-4 ಎ ಎಂದು ಗುರುತಿಸಿರುತ್ತೇನೆ. ಪ್ರಕರಣದಲ್ಲಿ ವಶಪಡಿಸಿ ಕೊಂಡ ಕೈನೆಟಿಕ್ ಹೊಂಡ ಸ್ಕೂಟರ್ ಸಂ: KA-19-L-2558 ಇದರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಕೂಡಾ ಪ್ರಕರಣ ಪತ್ತೆ ಹಚ್ಚಿದ ಪೊಲೀಸ್ ಇಲಾಖೆಯವರೇ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು , ಮಂಗಳೂರು ಇಲ್ಲಿಂದ ಪಡೆದುಕೊಂಡಿದ್ದು, ಸದ್ರಿ ಬಿ ವರದಿಯ ಮೂಲ ಪ್ರತಿಯನ್ನು ತಾನು ಪಡೆದುಕೊಂಡಿದ್ದು, ಅದರ ಛಾಯಾ ಪ್ರತಿಯನ್ನು ಪ್ರಾಧಿಕಾರಕ್ಕೆ ಒಪ್ಪಿಸಿದ್ದು,ಅದನ್ನು ಈಗ ನೋಡಿ ನಿಶಾನೆ ಪಿ-5 ಎಂದು , ಅದರ ಮೇಲಿನ ದೃಡೀಕೃತ ತನ್ನ ಸಹಿಯನ್ನು ನಿಶಾನೆ ಪಿ-5 ಎ ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ವಾಹನವನ್ನಾಗಲೀ ಅಥವಾ ಇತರೆ ಸೊತ್ತುಗಳನ್ನಾಗಲೀ ಮಾಲೀಕತ್ವ ಕೋರಿ ಯಾರೊಬ್ಬರೂ ಪಡೆಯಲು ಮುಂದೆ ಬಾರದೇ ಇರುವುದರಿಂದ ,ಸದ್ರಿ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 43 ಸಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮಾನ್ಯ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ,ದ.ಕ ಜಿಲ್ಲೆ ಇವರಿಗೆ ದಿ:4-11-2010ರಂದು ಪ್ರಕರಣದ ಎಲ್ಲಾ ದಾಖಲೆಗಳನ್ನು ಅಡಕಗೊಳಿಸಿ ಸವಿಸ್ತರ ತನಿಖಾ ವರದಿಯನ್ನು ಒಪ್ಪಿಸಿರುತ್ತೇನೆ. ಅದನ್ನು ಈಗ ನೋಡಿ ನಿಶಾನೆ ಪಿ-6 ಎಂದು, ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ-6 ಎ ಎಂದು ಗುರುತಿಸಲಾಯಿತು. ಪ್ರಕರಣದ ಸೊತ್ತುಗಳ ಪೈಕಿ ಮದ್ಯವನ್ನು ದಿ:10-11-2010ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲಾಗಿರುವುದಾಗಿ ಸಾಕ್ಷಿ ನುಡಿಯುತ್ತಾ ಪ್ರಕರಣದಲ್ಲಿ ಜಪ್ತಾದ ಕೈನೆಟಿಕ್ ಹೊಂಡ ಸ್ಕೂಟರ್ ಸಂ: KA-19-L-2558 ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಪ್ರಾಧಿಕಾರದ ಮುಂದೆ ಪ್ರಾರ್ಥಿಸಿ ಕೊಂಡಿರುತ್ತಾರೆ.

ವಿಚಾರಣಾ ಸಂದರ್ಭದಲ್ಲಿ ವಾಹನದ ಮಾಲೀಕರಾಗಲಿ, ಅವರ ಪರ ಪ್ರತಿನಿಧಿಗಳಾಗಲೀ ಹಾಜರಿರದ ಕಾರಣ ರಕ್ಷಣಾ ಪರ ಸಾಕ್ಷಿಗಳು ಇಲ್ಲವೆಂದು ಪರಿಗಣಿಸಿ, ಅಭಿಯೋಗದ ಪರ ಸಾಕ್ಷಿಗಳ ವಿಚಾರಣೆ ಮುಕ್ತಾಯಗೊಳಿಸಿ, ಸರ್ಕಾರಿ ಅಭಿಯೋಜಕರ ವಾದ ಮಂಡನೆಯನ್ನು ಆಲಿಸಲಾಯಿತು.

ಪ್ರಕರಣದ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:5-9-2009ರಂದು ಜಪ್ತು ಪಡಿಸಿಕೊಂಡಿರುವ ಕೈನೆಟಿಕ್ ಹೊಂಡ ಸ್ಕೂಟರ್ ಸಂ: KA-19-L-2558 ರಲ್ಲಿ ಅಕ್ರಮವಾಗಿ 9.000 ಲೀಟರ್ ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡಿರುವುದರಿಂದ ವಾಹನದ ಮಾಲೀಕರು ಅಥವಾ ತತ್ಸಂಬಂಧ ವ್ಯಕ್ತಿಗಳು ತಮ್ಮ ತಿಳುವಳಿಕೆಯಿಂದಲೇ ಈ ಅಪರಾಧವೆಸಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಲು, ಅಥವಾ ಪ್ರಕರಣದಲ್ಲಿ ತಮ್ಮ ನಿರಾಪರಾಧಿತ್ವವನ್ನು ಸಾಬೀತುಪಡಿಸಲು ಯಾವುದೇ ದಾಖಲಾತಿಗಳನ್ನು ಪ್ರಾಧಿಕಾರದ ಮುಂದೆ ಒದಗಿಸಲು ವಿಫಲರಾಗಿರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರ ದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ,ಬಂದರು ಮಂಗಳೂರು ಇವರ ಠಾಣಾ ತಕ್ಷೀರು ಸಂಖ್ಯೆ: 8/2009 ದಿ:-5-9-2009 ರಂದು ದಾಖಲಿಸಿದ ಪ್ರಕರಣದಲ್ಲಿ ಆರೋಪಿಯು 9.000 ಲೀಟರ್ ಅಕ್ರಮ ಗೋವಾ ನಿರ್ಮಿತ ಮದ್ಯವನ್ನು ಸಾಗಾಣಿಕೆ ಮಾಡುವುದನ್ನು ಪತ್ತೆಹಚ್ಚಿ, ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಕೈನೆಟಿಕ್ ಹೊಂಡ ಸ್ಕೂಟರ್ ಸಂ: KA-19-L-2558 ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 2 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಅಥವಾ ತಕ್ಷೀರು ದಾಖಲಿಸಿದ ಪೊಲೀಸ್ ಠಾಣೆಯಲ್ಲಿ ಅಥವಾ ಕಾರ್ಯವ್ಯಾಪ್ತಿಯ ಅಬಕಾರಿ ಇಲಾಖಾ ಕಛೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಅಥವಾ ಆರೋಪಿಗಳು ವಾಹನದ ಮಾಲೀಕತ್ವ ನಿರೂಪಿಸಿ ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್ ಟ್ರಾಕ್ಟ್ ವರದಿಯಲ್ಲಿ ನಮೂದಿಸಲಾಗಿರುವ ವಾಹನದ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ಕಾರಣ ಕೇಳಿ ನೋಟಿಸನ್ನು ನೀಡಲಾಗಿದ್ದರೂ, ವಾಹನದ ಮಾಲೀಕರಿಂದಾಗಲೀ , ಅರೋಪಿತ ವ್ಯಕ್ತಿಯಿಂದಾಗಲೀ ಯಾವುದೇ ಉತ್ತರ/ಹೇಳಿಕೆಗಳು ಪ್ರಾಧಿಕಾರದಲ್ಲಿ ಸ್ವೀಕೃತವಾಗದೇ ಇರುವುದ ರಿಂದ ಹಾಗೂ ಗೋವಾ ರಾಜ್ಯದಿಂದ ಕಡಿಮೆ ಬೆಲೆಯ ಮದ್ಯವನ್ನು ಕರ್ನಾಟಕ ರಾಜ್ಯದಲ್ಲಿ ಸರಬರಾಜು ಮಾಡಿ ತನ್ಮೂಲಕ ಹೆಚ್ಚಿನ ವರಮಾನ ಪಡೆಯುವ ಉದ್ದೇಶದಿಂದ ಅಕ್ರಮವಾಗಿ ಮದ್ಯ ತುಂಬಿದ ಬಾಟಲಿಗಳನ್ನು ಗೋವಾದಿಂದ ರೈಲು ಮೂಲಕ ಮಂಗಳೂರಿಗೆ ತಂದು ನಂತರ ವಾಹನದಲ್ಲಿ ಸಾಗಾಣಿಕೆ ಮಾಡಿರುವುದು ಪ್ರಕರಣದ ದಾಖಲಾತಿಗಳಿಂದ ಸಾಬೀತಾಗಿರುತ್ತದೆ. ಅಲ್ಲದೇ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ

ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರ ಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಹಾಗೂ ದಸ್ತಗಿರಿಯಾದ ಆರೋಪಿ ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.ದಸ್ತಗಿರಿಯಾದ ವ್ಯಕ್ತಿಯು ಖುದ್ದಾಗಿ ವಾಹನದಲ್ಲಿ ಮದ್ಯವನ್ನು ಸಾಗಾಟ ಮಾಡಿರುವುದು ಹಾಗೂ ತದನಂತರದಲ್ಲಿ ವಾಹನದ ಮಾಲೀಕರಿಗೆ ಈ ಬಗ್ಗೆ ಕಾರಣ ಕೇಳಿ ನೋಟಿಸು ನೀಡಲಾಗಿದ್ದರೂ ಸದ್ರಿಯವರಿಂದ ಯಾವುದೇ ಉತ್ತರ ಬಾರದೇ ಇರುವುದರಿಂದ ಅಕ್ರಮವು ವಾಹನದ ಮಾಲೀಕರ ತಿಳುವಳಿಯಿಂದಲೇ ನಡೆದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಕೈನೆಟಿಕ್ ಹೊಂಡಾ ಸ್ಕೂಟರ್ ಜಪ್ತಾಗಿ ಈಗಾಗಲೇ 1 ವರ್ಷ 2 ತಿಂಗಳೂ ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ಸಂ: KA-19-L-2558 ಕೈನೆಟಿಕ್ ಹೊಂಡ ಸ್ಕೂಟರನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಸಿ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/70/ಡಿಟಿಸಿಆರ್/2009-10 ದಿ: 30-11-2010**

ಬಿ.ವಿ.ಹೂವಪ್ಪ ಗೌಡ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 43 (ಬಿ) ಅಡಿ ಕ್ರಮ ಜರುಗಿಸಿ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಬಂದರು,ಮಂಗಳೂರು ಇವರ ಠಾಣಾ ಕ್ರೈಂ ಸಂ: 8/2009 ದಿ:5-9-2009ರಲ್ಲಿ ಜಪ್ತು ಪಡಿಸಿಕೊಂಡಿರುವ ಕೈನೆಟಿಕ್ ಹೊಂಡ ಸ್ಕೂಟರ್ ಸಂ: KA-19-L-2558ನ್ನು ನಿಯಮ 43(ಸಿ)ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 30-11-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಬಿ.ವಿ.ಹೂವಪ್ಪ ಗೌಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1:– ಶ್ರೀಮತಿ.ಕಮಲ,ಮ.ಹೆಚ್.ಸಿ ಸಂ: 817,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ
ವಿಶೇಷ ಪೊಲೀಸ್ ಠಾಣೆ, ಬಂದರು ಮಂಗಳೂರು

ಪ್ರಾ.ಸಾ-2:- ಶ್ರೀ.ಎಂ.ಕೇಶವಮೂರ್ತಿ, ಅಬಕಾರಿ ನಿರೀಕ್ಷಕರು
ಮಂಗಳೂರು ದಕ್ಷಿಣ ವಲಯ-2,ಮಂಗಳೂರು

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರಿನ ಪ್ರತಿ
ನಿಶಾನೆ ಪಿ–1 ಎ : ಅದರ ಮೇಲಿನ ಸಹಿ
ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–3 : ಸೊತ್ತು ಪಟ್ಟಿಯ ಪ್ರತಿ
ನಿಶಾನೆ ಪಿ–4 : ರಾಸಾಯನಿಕ ವಿಶ್ಲೇಷಕರ ವರದಿ
ನಿಶಾನೆ ಪಿ–4 ಎ : ಅದರ ಮೇಲಿನ ಸಹಿ.
ಜಶಾನೆ ಪಿ–5 : ಬಿ ಎಕ್ಸ್ ಟ್ರಾಕ್ಟ್ ವರದಿಯ ಜೆರಾಕ್ಸ್ ಪ್ರತಿ
ನಿಶಾನೆ ಪಿ–5 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–6 : ದಿನಾಂಕ:4-11-2010ರಂದು ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ರವರಿಗೆ ಬರೆದ ಸವಿಸ್ತರ ತನಿಖಾ ವರದಿ
ನಿಶಾನೆ ಪಿ–6 ಎ : ಅದರ ಮೇಲಿನ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ಬಿ.ವಿ.ಹೂವಪ್ಪ ಗೌಡ**
ಪಿ.ಆರ್.1791
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/552/ಡಿಟಿಸಿಆರ್/2005–06, ದಿನಾಂಕ:24–02–2011**

**ಉಪಸ್ಥಿತರು:** ಬಿ.ವಿ ಹೂವಪ್ಪ ಗೌಡ,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಫಿರ್ಯಾದುದಾರರು:–**

ಪೊಲೀಸ್ ಉಪ ನಿರೀಕ್ಷಕರು
ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು

**ಆರೋಪಿಗಳು**

1) ಯಂ ಬಾಲಕೃಷ್ಣ, ಬಿನ್: ಮಹಾಲಿಂಗ ನಾಯ್ಕ
ಕಿನ್ನಿಗಾರು ಮನೆ, ನೆಟ್ಟಣಿಗೆ ಗ್ರಾಮ, ಕಾಸರಗೋಡು ತಾಲೂಕು

**ಮಾಲೀಕರು**

ಶ್ರೀ.ಚೋಮ ನಾಯ್ಕ ಬಿನ್:ಮಾಂಕು ನಾಯ್ಕ
ಮನೆ ನಂ:IV/218,ಮೊಗಲತಿ, ಮೂಲಮನೆ, ಕಿನ್ನಿಂಗಾರ್ ಅಂಚೆ, ಮುಳ್ಳೇರಿಯಾ
ಕಾಸರಗೋಡು ಜಿಲ್ಲೆ.

**ಪ್ರಕರಣದ ಮುಖ್ಯಾಂಶಗಳು:–**

ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರುರವರು ದಿ:22–1–2006ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ರಾತ್ರಿ 1–00 ಗಂಟೆ ಸಮಯದಲ್ಲಿ ಪುತ್ತೂರು ತಾಲೂಕು ಪಾಣಾಜೆ ಗ್ರಾಮದ ದೈದೋಟ ಎಂಬಲ್ಲಿ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ, ಅರ್ಲಪದವು ಕಡೆಯಿಂದ ಕಾಸರಗೋಡು ತಾಲೂಕಿನ ಪೆರ್ಲ ಕಡೆಗೆ ಯಾವುದೇ ಪರವಾನಿಗೆ ಇಲ್ಲದೇ ಅಕ್ರಮವಾಗಿ 100 ಮಿಲಿಯ ನಕಲಿ ಸಾರಾಯಿ ತುಂಬಿದ ಒಟ್ಟು 4600 ಸಾರಾಯಿ ಸ್ಯಾಚೇಟ್ (ಒಟ್ಟು 460 ಲೀಟರು ಸಾರಾಯಿ) ಗಳನ್ನು ಜೀಪು ನೋಂದಣಿ ಸಂ: KL-14-C-421ರಲ್ಲಿ ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 11,12 ಮತ್ತು 14ರ ಉಲ್ಲಂಘನೆ ಹಾಗೂ ಕಲಂ 32, 38(ಎ) ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಸದ್ರಿ ವಾಹನ ಹಾಗೂ ಸಾರಾಯಿ ಸ್ಯಾಚೇಟುಗಳನ್ನು ಜಪ್ತು ಮಾಡಿ ಮಹಜರು ಕ್ರಮ ಜರುಗಿಸಿ ಆರೋಪಿ ಎಂ.ಬಾಲಕೃಷ್ಣ ಬಿನ್:ಮಹಾಲಿಂಗ ನಾಯ್ಕ್, ಕಿನ್ನಿಂಗಾರ್ ಮನೆ, ನೆಟ್ಟಣಿಗೆ ಗ್ರಾಮ, ಕಾಸರಗೋಡು ಇವರನ್ನು ದಸ್ತಗಿರಿ ಮಾಡಿ ಆರೋಪಿ ವ್ಯಕ್ತಿಯ ವಿರುದ್ಧ ಕ್ರೈಂ ಸಂ:10/2006, ದಿ:22–1–2006ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರ.ಮಾ.ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ಸೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು(2), ಜ್ಯಾರಿ ಮತ್ತು ತನಿಖೆ, ಪುತ್ತೂರು ಇವರಿಗೆ ಪ್ರಾಧಿಕಾರದ ದಿ:24–1–2006ರ ಅನುಮತಿಯಂತೆ ದಿ:23–3–2006ರಂದು ಮುಂದಿನ ತನಿಖೆಗೆ ಹಸ್ತಾಂತರಿಸಿರುತ್ತಾರೆ

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:–**

1) ಜೀಪು ನೋಂದಣಿ ಸಂ: KL-14-C-421

2) 13 ಪಾಲಿಥೀನ್ ಚೀಲಗಳಲ್ಲಿ ತಲಾ 100 ಮಿಲಿಯ ನಕಲಿ ಸಾರಾಯಿ ತುಂಬಿದ ಒಟ್ಟು 4600 ಸಾರಾಯಿ ಸ್ಯಾಚೇಟ್– ಒಟ್ಟು 460 ಲೀಟರು ಸಾರಾಯಿ

(ಮೇಲಿನ ಪ್ರತಿ ಚೀಲಗಳಿಂದ ತಲಾ ಐದರಂತೆ ಒಟ್ಟು 65 ಸಾರಾಯಿ ಸ್ಯಾಚೇಟುಗಳನ್ನು ಮಾದರಿಗಾಗಿ ತೆಗೆಯಲಾಗಿದೆ)

ವಾಹನ ಜೀಪು ನೋಂದಣಿ ಸಂ: KL-14-C-421 ಇದರ ನೊಂದಾಣಿ ಮಾಲೀಕರಾದ ಶ್ರೀ.ಚೋಮ, ಬಿನ್:ಮಾಂಕು ನಾಯ್ಕ, ಮೊಗಲತ್ತಿ ಮೂಲಮನೆ, ಕಿನ್ನಿಂಗಾರ್ ಅಂಚೆ, ಮುಳ್ಳೇರಿಯಾ, ಕಾಸರಗೋಡು ಜಿಲ್ಲೆ ತಮ್ಮ ವಕೀಲರ ಮೂಲಕ ದಿ:26–4–2006ರಂದು ಅರ್ಜಿ ಸಲ್ಲಿಸಿ, ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರ ಅರ್ಜಿಯ ವಿಚಾರಣೆ ಕೈಗೊಂಡು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ ಜಿಲ್ಲೆ,ಮಂಗಳೂರು ಇವರ ಪ್ರಾಧಿಕಾರದಿಂದ ದಿನಾಂಕ: 2–11–2006ರಂದು ಹೊರಡಿಸಿದ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಆದೇಶಿಸಲಾಗಿದೆ. ಸದ್ರಿ ಅದೇಶದ ವಿರುದ್ಧ ವಾಹನದ ಮಾಲೀಕರು ಮಾನ್ಯ ಪ್ರಿನ್ಸಿಪಾಲ್ ಸೆಷನ್ಸ್ ಜಡ್ಜ್ ನ್ಯಾಯಾಲಯ,ದ.ಕ ಜಿಲ್ಲೆ ಮಂಗಳೂರು ಇಲ್ಲಿ ಕ್ರಿ.ಅ.ಸಂ: 339/2006ರಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಘನ ನ್ಯಾಯಾಲಯವು ಮೇಲ್ಮನವಿಯ ವಿಚಾರಣೆ ನಡೆಸಿ ದಿ:27–11–2006 ರಂದು ಹೊರಡಿಸಿದ ಅದೇಶದಲ್ಲಿ ಅಧಿಕೃತ ಅಧಿಕಾರಿಗಳ ಪ್ರಾಧಿಕಾರದ ದಿನಾಂಕ:2–11–2006ರ ಮಧ್ಯಂತರ ಆದೇಶಕ್ಕೆ ತಡೆಯಾಜ್ಞೆ ನೀಡಿರುತ್ತದೆ.

ಎತನ್ಮಧ್ಯೆ ಮೊಕದ್ದಮೆಯ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ಜಾರಿ ಮತ್ತು ತನಿಖೆ,ಪುತ್ತೂರು ಇವರು ದಿ:10–4–2006ರಂದು ಸಲ್ಲಿಸಿದ್ದ ತನಿಖಾ ವರದಿ ಸಂ: ಜಾರಿ ಮತ್ತು ತನಿಖೆ ಕ್ರೈಂ ಸಂ:31/2005–06 ಇದರೊಂದಿಗೆ ಜಪ್ತುಪಡಿಸಿಕೊಂಡ ಸಾರಾಯಿ ಸ್ಯಾಚೇಟುಗಳ ಮಾದರಿಗಳ ವಿಶ್ಲೇಷಣಾ ವರದಿ ಸಂ:164–65ರ ಪ್ರತಿ ಮತ್ತು ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಹೆಚ್ಚುವರಿ ನೋಂದಣಿ ಅಧಿಕಾರಿಗಳು, ಕಾಸರಗೋಡು ಜಿಲ್ಲೆ ಇವರ ಕಛೇರಿಯಿಂದ ಪಡೆದು ಸಲ್ಲಿಸಿ, ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಸಾರಾಯಿ ಸ್ಯಾಚೇಟುಗಳನ್ನು (ಮಾದರಿಗಳನ್ನು ಹೊರತು ಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿದ ಮೇರೆಗೆ ಸದ್ರಿ ಜಪ್ತುಪಡಿಸಿ ಕೊಂಡ ಸಾರಾಯಿ ಸ್ಯಾಚೇಟುಗಳನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ ಜಿಲ್ಲೆ, ಮಂಗಳೂರು ಇವರು ದಿ:27–2–2007ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ. ಅದರಂತೆ ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ಸಮಕ್ಷಮದಲ್ಲಿ ದಿ:3–3–2007ರಂದು ನಾಶಪಡಿಸಲಾಗಿರುತ್ತದೆ.

ತನಿಖಾಧಿಕಾರಿಗಳು ಸಲ್ಲಿಸಿದ್ದ ಬಿ ಎಕ್ಸ್ ಟ್ರಾಕ್ಟ್ ವರದಿಯ ಪ್ರಕಾರ ಶ್ರೀ. ಚೋಮ ನಾಯ್ಕ, ಬಿನ್: ಮಾಂಕು ನಾಯ್ಕ, ಮನೆ ನಂ:IV/218 ಮೊಗಲತ್ತಿ ಮೂಲಮನೆ, ಕಿನ್ನಿಂಗಾರ್ ಅಂಚೆ, ಮುಳ್ಳೇರಿಯಾ, ಕಾಸರಗೋಡು ಜಿಲ್ಲೆ ಇವರು ದಿ:30–8–2000ರಿಂದ ಅನ್ವಯವಾಗುವಂತೆ ವಾಹನದ ಮಾಲೀಕರಾಗಿರುವುದಾಗಿ ಕಂಡುಬರುತ್ತದೆ. ಅಂತೆಯೇ ವಾಹನದ ಮಾಲೀಕರಿಗೆ, ಹಣಕಾಸು ಸಂಸ್ಥೆಗೆ ಹಾಗೂ ಆರೋಪಿತ ವ್ಯಕ್ತಿಗೆ ದಿನಾಂಕ:11–8–2006ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ಅಡಿಯಲ್ಲಿ ಪ್ರಕರಣದಲ್ಲಿ ಜಪ್ತಾದ ವಾಹನ ಹಾಗೂ ಸೊತ್ತುಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಬಾರದು ಎಂಬುದಕ್ಕೆ ಕಾರಣ ಕೇಳುವ ನೋಟಿಸು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರು ಮತ್ತು ಹಣಕಾಸು ಸಂಸ್ಥೆಗೆ ದಿ:14–8–2006ರಂದು ಜಾರಿಯಾಗಿರುತ್ತದೆ.

ಹಣಕಾಸು ಸಂಸ್ಥೆಯಾದ ಮೆ:ಮಣಪುರಂ ಜನರಲ್ ಫೈನ್ಯಾನ್ಸ್ ಅಂಡ್ ಲೀಸಿಂಗ್ ಲಿಮಿಟೆಡ್, ಕಾಸರಗೋಡು ಇವರು ದಿ:21–8–2006ರಂದು ತಮ್ಮ ಉತ್ತರವನ್ನು ಸಲ್ಲಿಸುತ್ತಾ ಸದ್ರಿ ವಾಹನಕ್ಕೆ ರೂ.90,000/–ನ್ನು ಪ್ರತಿ ಕಂತಿನಲ್ಲಿ ರೂ.4,400/–ರಂತೆ ಮರುಪಾವತಿಸುವ ಷರತ್ತಿನಲ್ಲಿ ಸಾಲ ನೀಡಲಾಗಿದ್ದು ಸದ್ರಿ ಸಾಲದ ಬಾಬ್ತು ಇನ್ನು 54,471/– ಬಾಕಿ ಇರುತ್ತದೆ. ವಾಹನವನ್ನು ಮುಟ್ಟುಗೋಲು ಹಾಕಿಕೊಂಡಲ್ಲಿ ಕಕ್ಷಿದಾರರು ಬೆಲೆಬಾಳುವ ತನ್ನ ಸೊತ್ತನ್ನು ಕಳೆದುಕೊಂಡು ತಮ್ಮ ಸಂಸ್ಥೆಯಿಂದ ನೀಡಲಾದ ಸಾಲಕ್ಕೂ ಯಾವುದೇ ಭದ್ರತೆಯಿರುವುದಿಲ್ಲ ಎಂದು ತಿಳಿಸಿ ವಾಹನದ ಮುಟ್ಟುಗೋಲು ನಡವಳಿಯನ್ನು ಕೈಬಿಡುವಂತೆ ವಿನಂತಿಸಿರುತ್ತಾರೆ. ವಾಹನದ ಮಾಲೀಕರು ದಿ:14–9–2006ರಂದು ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತಾ, ಪ್ರಾಧಿಕಾರದಿಂದ ಕೇಳಲಾದ ಕಾರಣ ಕೇಳಿ ನೋಟಿಸಿನೊಂದಿಗೆ ಸಮರ್ಪಕವಾದ ದಾಖಲೆಗಳನ್ನು ನೀಡದೇ ಇರುವುದರಿಂದ ಸದ್ರಿ ನೋಟಿಸು ನ್ಯಾಯ ಸಮ್ಮತ ನೋಟಿಸು ಆಗಿರುವುದಿಲ್ಲ ಎಂದು ತಿಳಿಸಿ ಪ್ರಕರಣವು ಸಂಪೂರ್ಣ ಸುಳ್ಳಾಗಿದ್ದು ,ಪೊಲೀಸ್ ಅಧಿಕಾರಿಗಳು ತಮ್ಮ ಜೀಪಿನ ಮೇಲೆ ಸುಳ್ಳು ಆಪಾದನೆ ಹೊರಿಸಿ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ಆ ದಿವಸ ಜೀಪಿನ ಚಾಲಕನು ಶ್ರೀ.ಚಂದ್ರೇ ಗೌಡ ,ಪುತ್ತೂರು ತಾಲೂಕಿನ ಸಾರಾಯಿ ಗುತ್ತಿಗೆ ದಾರರು ಇವರಿಗೆ ಸೇರಿದ 500 ಲೀ ಸಾರಾಯಿ ಸ್ಯಾಚೇಟುಗಳನ್ನು ಸಣ್ಣಪಾದೆ ಗಾಳಿಮುಖ ಮೇನಿಲಾ ಎಂಬಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದ ಸಂದರ್ಭದಲ್ಲಿ ಸುಳ್ಳು ಮೊಕದ್ದಮೆ ದಾಖಲಿಸಿರುವುದಾಗಿ ತಿಳಿಸಿ ಈ ಬಗ್ಗೆ ಸಾರಾಯಿ ಸಾಗಾಟದ ರಹದಾರಿ ಪತ್ರದ ಪ್ರತಿಯೊಂದನ್ನು ಅಡಕಗೊಳಿಸಿ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ.ಸದ್ರಿ ರಹದಾರಿ ಪತ್ರವನ್ನು ಪರಿಶೀಲಿಸಲಾಗಿ ದಿ:20–1–2006ರಂದು ನೀಡಿದ ರಹದಾರಿಯಲ್ಲಿ ಸಣ್ಣಪಾದೆ ಗಾಳಿಮುಖ ಮೇನಿಲಾ ಎಂಬಲ್ಲಿಗೆ ಒಟ್ಟು 500 ಲೀ ಸಾರಾಯಿ (5000 ಸಾ. ಸ್ಯಾಚೇಟ್‌ಗಳು)ಯನ್ನು ಸಾಗಾಟಕ್ಕೆ ಅನುಮತಿಸಿ, ಅನುಮತಿಸಿದ ಸದ್ರಿ ರಹದಾರಿಯು ದಿ:23–1–2006ರವರೆಗೆ ಮಾನ್ಯತೆಯ ಅವಧಿ ಹೊಂದಿರುವುದು ಕಂಡುಬರುತ್ತದೆ.

ಮಾನ್ಯ ಸತ್ರ ನ್ಯಾಯಾಲಯವು ಕ್ರಿ.ಅ.ಸಂ: 339/2006ರಲ್ಲಿ ದಿ:9–5–2007ರಂದು ಹೊರಡಿಸಿದ ತೀರ್ಪು ಅದೇಶದಲ್ಲಿ 'The appeal is allowed . The impugned order dt:2-11-2006 in case No:EIB:DTCR/552/2005-06 passed by the authorized Officer and Superintendent of Excise,DK Mangalore is hereby set aside. The seized vehicle bearing Registration No:KL-14-C-421 shall be release to the custody of the appleant on his production of Bank Guarantee for Rs. 2,00,000/- forthwith'

ಮಾನ್ಯ ಸತ್ರ ನ್ಯಾಯಾಲಯದ ಆದೇಶವನ್ನು ಗೌರವಿಸಿ ವಾಹನದ ಮಾಲೀಕರು ರೂ.2,00,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿ ಭದ್ರತಾ ಪತ್ರವನ್ನು ಪ್ರಾಧಿಕಾರಕ್ಕೆ ಒಪ್ಪಿಸುವ ಹಾಗೂ ಇತರೆ ಷರತ್ತುಗಳನ್ನು ನಿಗಧಿಪಡಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಿ ಪ್ರಾಧಿಕಾರದ ಅದೇಶ ಸಂ: ಇಐಬಿ: ಡಿಟಿಸಿಆರ್: 552:2005–06 ದಿ:11–6–2007ರ ಪ್ರಕಾರ ಆದೇಶ ಹೊರಡಿಸಲಾಗಿದ್ದರೂ ವಾಹನದ ಮಾಲೀಕರು ಬ್ಯಾಂಕ್ ಗ್ಯಾರೆಂಟಿ ಭದ್ರತೆಯನ್ನು ಒಪ್ಪಿಸಿ ವಾಹನವನ್ನು ತನ್ನ ಸುಪರ್ಧಿಗೆ ಪಡೆಯಲು ವಿಫಲರಾಗಿರುತ್ತಾರೆ. ಈ ಬಗ್ಗೆ ತನಿಖಾದಿಕಾರಿ, ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ವಲಯ ಇವರು ದಿ:26–9–2008ರಂದು ಪ್ರಾಧಿಕಾರಕ್ಕೆ ವರದಿ ಒಪ್ಪಿಸಿರುತ್ತಾರೆ.

ವಾಹನ ಮುಟ್ಟುಗೋಲು ನಡವಳಿ ಬಗ್ಗೆ ವಿಚಾರಣೆಯನ್ನು ಪ್ರಾರಂಭಿಸಿ ಪ್ರಕರಣದ ಫಿರ್ಯಾಧುದಾರ, ಸಹ ಸಾಕ್ಷಿದಾರರು , ತನಿಖಾಧಿಕಾರಿಗಳು ಹಾಗೂ ಮಾದರಿ ರವಾನೆದಾರರು ಪ್ರಾ.ಸಾ–1 ರಿಂದ 4ರವರೆಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ.

ಅಭಿಯೋಗದ ಪರ ಸಾಕ್ಷಿ ವಿಚಾರಣೆಯನ್ನು ನಡೆಸಿ, ರಕ್ಷಣಾ ಪರ ಸಾಕ್ಷಿ ಇಲ್ಲವೆಂದು ರಕ್ಷಣಾ ವಕೀಲರು ತಿಳಿಸಿರುವ ಮೇರೆಗೆ ರಕ್ಷಣಾ ವಕೀಲರ ಮತ್ತು ಸರ್ಕಾರಿ ವಕೀಲರ ವಾದವಿವಾದವನ್ನು ದಿನಾಂಕ:27–1–2011ರಂದು ಆಲಿಸಲಾಯಿತು. ಪ್ರಕರಣದಲ್ಲಿ ಅಬಕಾರಿ ಕಾಯಿದೆ 1965 ಕಲಂ 54 ರಂತೆ ಶೋಧನಾ ಸಮುಚಿತ ವಾರೆಂಟ್ ಪಡೆಯದೇ ಇರುವುದು ಸ್ವತಂತ್ರ ಸಾಕ್ಷಿದಾರರ ಸಾಕ್ಷಿಯನ್ನು ಪಡೆಯದೇ ಇರುವುದು ಹಾಗೂ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಸಾರಾಯಿಗೆ ಸಂಬಂಧಿಸಿದಂತೆ ಅಧಿಕೃತ ರಹದಾರಿ ಪತ್ರಗಳನ್ನು ನೀಡಲಾಗಿರುತ್ತದೆ ಎಂದು ತಿಳಿಸಿ ಪ್ರಕರಣವನ್ನು ಕೈಬಿಡಬೇಕೆಂದು ರಕ್ಷಣಾ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ಅಭಿಯೋಜಕರು ಪ್ರತಿವಾದ ಮಂಡಿಸುತ್ತಾ ಪ್ರಕರಣದ ಸಂದರ್ಭದಲ್ಲಿ ಕಲಂ 54ರಡಿ ಶೋಧನಾ ವಾರೆಂಟನ್ನು ಪಡೆಯದೇ ಇರುವುದು ಅಭಿಯೋಗದ ವಿಫಲತೆ ಎಂಬುದಾಗಿ ಪರಿಗಣಿಸಲಾಗದು. ಏಕೆಂದರೆ ಕಲಂ 54ರಡಿ ಶೋಧನಾ ವಾರೆಂಟನ್ನು ಪಡೆಯುವುದು ಕಾನೂನಿನಡಿ ಅಜ್ಞಾಪಕವಾಗಿರುವುದಿಲ್ಲ ಎಂಬುದನ್ನು ಈ ಕೆಳಕಂಡಂತೆ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪನ್ನು ಆಧರಿಸಿ ವ್ಯಾಖ್ಯಾನಿಸಬೇಕಾಗಿರುತ್ತದೆ. "ಶೋಧನಾ ವಾರೆಂಟ್‌ಗಳನ್ನು ಪಡೆಯಲು ವಿಫಲರಾದ ಬಗ್ಗೆ ಕಾರಣಗಳನ್ನು ದಾಖಲಿಸದೇ ಇರುವುದು ಕೇವಲ ಕಾನೂನಿನ ಪ್ರಕ್ರಿಯೆಯಲ್ಲಿ ಒಂದು ಅನಿಯಮತೆಯಾಗಿದ್ದು ಕೇವಲ ಅದೇ ಒಂದು ಕಾರಣದಡಿ ಇಡೀ ಶೋಧನೆಯನ್ನು ಅಥವಾ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಪ್ರಾದಿಕಾರವು ಮಾಡಿದ ಅಂತಿಮ ಮುಟ್ಟುಗೋಲು ಅದೇಶವನ್ನು ಕಾನೂನಿನಡಿ ಅಸಿಂಧುವೆಂದು ಘೋಷಿಸಲು ಬರುವುದಿಲ್ಲ. ಶೋಧನೆಯನ್ನು ಮಾಡುವ ಮೊದಲು ವಾರೆಂಟ್ ಪಡೆದು ಕೊಳ್ಳದೇ ಇರುವ ಬಗ್ಗೆ ಅಥವಾ ವಾರೆಂಟ್ ಪಡೆಯಲು ವಿಫಲರಾದ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ಕಾರಣಗಳನ್ನು ದಾಖಲಿಸದೇ ಇರುವುದು ಅರೋಪಿಯ ಹಕ್ಕಿಗೆ ಅಥವಾ ಆತನ ಹಿತಾಸಕ್ತಿಗೆ ದಕ್ಕೆಯನ್ನು ಉಂಟು ಮಾಡುತ್ತದೆ ಎಂಬುದಾಗಿ ಅರೋಪಿ ತೋರಿಸಿ ಕೊಡಬೇಕಾಗುತ್ತದೆ. ಶೋಧನಾ ವಾರೆಂಟನ್ನು ಪಡೆಯಲೇ ಬೇಕು ಎಂಬುದು

ಕಡ್ಡಾಯವಾಗಿರುವುದಿಲ್ಲ ಅಥವಾ ಅಜ್ಞಾಪಕವಾಗಿರುವುದಿಲ್ಲ. ಶೋಧನಾ ವಾರೆಂಟನ್ನು ಪಡೆದುಕೊಳ್ಳಲು ವಿಫಲರಾದ ಬಗ್ಗೆ ಕಾರಣಗಳನ್ನು ನಮೂದಿಸದೇ ಇರುವುದು ಇಡೀ ಶೋಧನೆ ಮತ್ತು ಅದರ ನಂತರದ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಅಂತಿಮ ಮುಟ್ಟುಗೋಲು ಅದೇಶ ಅಸಿಂಧುಗೊಳಿಸುವುದಿಲ್ಲ. ಈ ರೀತಿ ಅಸಿಂಧುಗೊಳಿಸಿದರೇ ಹಾಡುಹಗಲೇ ಅಥವಾ ಕಣ್ಣೆದುರೇ ಅಕ್ರಮ ಮದ್ಯ ಸಮೇತ ಪ್ರಕರಣದ ಅಪರಾಧಿಗಳನ್ನು ಕೈಚೆಲ್ಲಬೇಕಾಗುತ್ತದೆ ಕಾನೂನನ್ನು ಅಪರಾಧಿಗಳಿಗೆ ಸಹಾಯವಾಗುವ ರೀತಿಯಲ್ಲಿ ಅರ್ಥಮಾಡಿಕೊಂಡಲ್ಲಿ ಇನ್ನೂ ಹೆಚ್ಚಿನ ಅಪರಾಧಗಳು ಆಗುವ ಸಂಭಾವ್ಯತೆಗಳು ಜಾಸ್ತಿ. ಆದುದರಿಂದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54 ರ ಹಿಂದಿನ ಉದ್ದೇಶವನ್ನು ಅರಿತು ವ್ಯಾಖ್ಯಾನಿಸಬೇಕಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಗೌರವಾನ್ವಿತ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ನೀಡಿದ ತೀರ್ಪು ಸಂ: ILR: 2004:KAR:536 ರ ಪುಟ ಸಂ:527ರಲ್ಲಿ ವಿವರವಾಗಿ ಪ್ರಸ್ತಾವಿಸಲಾಗಿದೆ. "ಹಾಗೂ ಪ್ರಕರಣದಲ್ಲಿ ಸ್ವತಂತ್ರ ಸಾಕ್ಷಿಗಳ ಹೇಳಿಕೆಗಳು ಸಿಂಧು ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಮತ್ತು ರಕ್ಷಣಾ ಪರ ವಕೀಲರು ಸಾರಾಯಿಯನ್ನು ರಹದಾರಿ ಮೂಲಕ ಸಾಗಾಟ ಮಾಡಲಾಗಿದೆ ಎಂದು ಉಲ್ಲೇಖಿಸಿರುವರಾದರೂ ಲಭ್ಯವಿರುವ ಸಾರಾಯಿ ಸಾಗಾಟದ ರಹದಾರಿ ಪತ್ರಗಳನ್ನು ಪರಿಶೀಲಿಸಲಾಗಿ ಸದ್ರಿ ರಹದಾರಿಯು 5000 ಸಾ.ಸ್ಯಾಚೇಟುಗಳ ಪರವಾನಿಗೆ ಹೊಂದಿದ್ದು ಜಪ್ತು ಸಂದರ್ಭದಲ್ಲಿ 4600 ಸಾ.ಸ್ಯಾ ಗಳು ಜಪ್ತಾಗಿರುವುದರಿಂದ ಅಂಕಿಅಂಶಗಳು ತಾಳೆ ಕಂಡು ಬಂದಿರುವುದಿಲ್ಲ ಹಾಗೂ ರಹದಾರಿಯಲ್ಲಿ ನಮೂದಿಸಿದ ಪ್ರದೇಶಕ್ಕೂ , ಕೃತ್ಯ ಸಂಭವಿಸಿದ ಪ್ರದೇಶಕ್ಕೂ ಕೂಡಾ ಒಂದಕ್ಕೊಂದು ತಾಳೆ ಕಂಡು ಬಂದಿರುವುದಿಲ್ಲ .ಹಾಗೂ ಸಾರಾಯಿ ಸಾಗಾಟದ ಬಗ್ಗೆ ರಹದಾರಿ ಪತ್ರ ನೀಡಿರುವ ಕುರಿತು ವಾಹನದ ಮಾಲೀಕರು ಸ್ವಷ್ಟವಾಗಿ ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಕಾರಣ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ತಮ್ಮ ಪ್ರತಿವಾದವನ್ನು ಮಂಡಿಸಿರುತ್ತಾರೆ. ಪ್ರಾಧಿಕಾರಕ್ಕೆ ಸಲ್ಲಿಸಿರುವ ದಾಖಲಾತಿಗಳು, ಪ್ರಾಸಿಕ್ಯೂಶನ್ ಪರ ನೀಡಿರುವ ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿ ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾಧಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ:22–1–2006 ರಂದು ಜೀಪು ಸಂ::KL-14-C-421 ಇದರಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳು ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಸಾರಾಯಿ ಸ್ಯಾಚೇಟುಗಳ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

3) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ್ಮ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಶ್ರೀಮತಿ.ಸುನೀತಾ ಅ.ಉ.ನಿ(2) ಪುತ್ತೂರು ವಲಯ ಇವರು ದಿ:25–3–2009ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ತನ್ನ ಕಾರ್ಯಭಾರದ ವರದಿಯಲ್ಲಿ ದಿ: 23–3–2006ರಂದು ಪುತ್ತೂರು ಗ್ರಾಮಾಂತರ ಪೋಲೀಸ್ ಠಾಣೆಯ ಠಾಣೆಯ ಪೋಲೀಸ್ ಉಪ ನಿರೀಕ್ಷಕರುವರು ಅ.ಕ್ರ ಸಂ: 10/2006 ದಿ:22–1–2006 ಇದರ ದಾಖಲೆಗಳ ಪ್ರತಿಗಳು ಮತ್ತು ಪ್ರಕರಣಕ್ಕೆ ಸಂಬಂಧಿಸಿದ 100 ಎಂ ಎಲ್ ನ 4200 ಸಾರಾಯಿ ತೊಟ್ಟೆ ಹಾಗೂ KL-14-C-421 ಮಹೀಂದ್ರ ಜೀಪನ್ನು 43ಎ ಮುಟ್ಟು ಗೋಲು ಬಗ್ಗೆ ತನಗೆ ಹಸ್ತಾಂತರಿಸಿರುವ ಬಗ್ಗೆ ಮತ್ತು ಸದ್ರಿ ಪ್ರಕರಣದ ತನಿಖೆಯನ್ನು ಕೈಗೊಂಡು ಜಪ್ತುಪಡಿಸಲಾದ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ ಬಗ್ಗೆ ಮತ್ತು ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪಡೆದುಕೊಂಡ ಬಗ್ಗೆ ಸಾಕ್ಷಿ ನೀಡಿ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ನಿಶಾನೆ ಪಿ–1 ರಿಂದ ನಿಶಾನೆ ಪಿ–4 ರವರೆಗೆ ಗುರುತಿಸಿರುತ್ತಾರೆ.

**ಪ್ರಾ.ಸಾ–2:–**

ಶ್ರೀ. ಪ್ರಕಾಶ್ ಕುಮಾರ್,ಅ.ರ.ಮಂಗಳೂರು ಉಪ ವಿಬಾಗ ಇವರು ದಿನಾಂಕ: 9–2–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ,ಪ್ರಕರಣಕ್ಕೆ ಸಂಬಂಧಿಸಿದ ಸಾರಾಯಿಯ ಮಾಧರಿಗಳನ್ನು ರಸಾಯನಿಕ ಪರೀಕ್ಷೆಗೆ ಕೊಂಡೊಯ್ದು ವಿಶ್ಲೇಷಣಾ ವರದಿಯನ್ನು ಪಡೆದುಕೊಂಡ ಬಗ್ಗೆ ಸಾಕ್ಷ್ಯ ನೀಡಿ ದಾಖಲೆಗಳನ್ನು ನಿಶಾನೆ ಪಿ–5 ಮತ್ತು 6 ಎಂದು ಗುರುತಿಸಿರುತ್ತಾರೆ.

**ಪ್ರಾ.ಸಾ –3**

ಶ್ರೀ. ಉದಯ ಕುಮಾರ್, ಪಿ.ಸಿ 1038, ಪುತ್ತೂರು ಗ್ರಾಮಾಂತರ ಪೋಲೀಸ್ ಠಾಣೆ, ಪುತ್ತೂರು ಇವರು ದಿನಾಂಕ:20–4–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡುತ್ತಾ ಪ್ರಕರಣ ಪತ್ತೆ ಹಚ್ಚಿದ ಪೋಲೀಸ್ ಅಧಿಕಾರಿಯೊಂದಿಗೆ ಇದ್ದು ಪ್ರಕರಣ ದಾಖಲಿಸಿಕೊಂಡ ಬಗ್ಗೆ ಸಾಕ್ಷಿ ನೀಡಿ ದಾಖಲೆಗಳನ್ನು ಗುರುತಿಸಿರುತ್ತಾರೆ. ಹಾಗೂ ರಕ್ಷಣಾ ಪರ ವಕೀಲರ ಅಡ್ಡ ಸವಾಲಿಗೆ ತಮ್ಮ ಉತ್ತರವನ್ನು ನೀಡಿರುತ್ತಾರೆ.

**ಪ್ರಾ.ಸಾ–4**

ಶ್ರೀ.ಸುನಿಲ್ ವೈ ನಾಯ್ಕ, ಪೋಲೀಸ್ ಉಪ ನಿರೀಕ್ಷಕರು, ಡಿಸಿಆರ್ಇ, ಸಿಐಡಿ,ಮಂಗಳೂರು ಇವರು ದಿನಾಂಕ:21–12–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿಯುತ್ತಾ, ತಾನು ಸಂಪ್ಯ ಪೋಲೀಸ್ ಠಾಣೆಯಲ್ಲಿ ಪೋಲೀಸ್ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭ ದಿನಾಂಕ:21–1–2006ರಂದು ದೊರೆತ ಖಚಿತ ಮಾಹಿತಿ ಮೇರೆಗೆ ಸಿಬ್ಬಂಧಿಗಳೊಂದಿಗೆ ಪುತ್ತೂರು ತಾಲೂಕು ಪಾಣಾಜೆ ಗ್ರಾಮದ ದೈತೋಟ ಎಂಬಲ್ಲಿ ವಾಹನ ತಪಾಸಣೆ ಮಾಡುತ್ತಿದ್ದಾಗ ದಿ:22–1–06 ರಂದು ರಾತ್ರಿ 1 ಗಂಟೆ ಸಮಯದಲ್ಲಿ ಅರ್ಲಪದವು ಕಡೆಯಿಂದ ಪೆರ್ಲ ಕಡೆ ಒಂದು ಜೀಪು ಅತಿ ವೇಗದಿಂದ ಬರುವುದನ್ನು ಕಂಡು ಸಂಶಯಗೊಂಡು ಜೀಪನ್ನು ನಿಲ್ಲಿಸಲಾಗಿ ವಾಹನದ ಚಾಲಕನು ವಾಹನ ನಿಲ್ಲಿಸಿ ಓಡಿ ಹೋಗಲು ಪ್ರಯತ್ನಿಸಿದಾಗ ಅವನನ್ನು ಹಿಡಿದು ವಿಚಾರಿಸಿದಾಗ ಜೀಪಿನಲ್ಲಿ ಹಿಂಬಾಗದಲ್ಲಿ ಪಾಲಿಥೀನ್ ಚೀಲದಲ್ಲಿ ಸಾರಾಯಿ ತೊಟ್ಟೆಗಳು ಇರುವುದಾಗಿ ಆತ ತಿಳಿಸಿದ ಮೇರೆಗೆ ಪಂಚರ ಸಮಕ್ಷಮ ಜೀಪನ್ನು ಪರಿಶೀಲಿಸಿದಾಗ 13 ಪಾಲಿಥೀನ್ ಚೀಲಗಳಲ್ಲಿ ಒಟ್ಟು 4600 ಸಾರಾಯಿ ಸ್ಯಾಚೇಟು

ಕಂಡು ಬಂದು, ಇದು ಅಕ್ರಮ ಸಾರಾಯಿ ಸಾಗಾಟ ಎಂದು ಪರಿಗಣಿಸಿ ಮಹಜರು ಜರುಗಿಸಿ ಸೊತ್ತುಗಳನ್ನು ವಶಕ್ಕೆ ತೆಗೆದು ಕೊಂಡು ಕರ್ನಾಟಕ ಅಬಕಾರಿ ಅಡಿ ಆರೋಪಿಯಾದ ಎಂ ಬಾಲಕೃಷ್ಣ, ಕಾಸರಗೋಡು ತಾಲೂಕು ಇವರ ವಿರುದ್ದ ಠಾಣಾ ಕ್ರೈಂ ಸಂ:10/2010ರಂತೆ ಪ್ರಕರಣ ದಾಖಲಿಸಿಕೊಂಡಿರುವುದಾಗಿ ಸಾಕ್ಷ್ಯ ನೀಡಿ ಪ್ರಕರಣದ ದಾಖಲೆಗಳನ್ನು ನಿಶಾನೆ ಪಿ–1 ರಿಂದ ನಿಶಾನೆ ಪಿ–10 ರವರೆಗೆ ಗುರುತಿಸಿರುತ್ತಾರೆ.

ಸಾಕ್ಷಿದಾರರನ್ನು ವಾಹನದ ಮಾಲೀಕರ ಪರ ವಕೀಲರು ಪಾಟೀ ಸವಾಲಿಗೆ ಒಳಪಡಿಸಿ ಸಾಕ್ಷಿದಾರರು, ಪಾಟೀ ಸವಾಲಿಗೆ ಉತ್ತರಿಸುತ್ತಾ ಮಹಜರನ್ನು ಸ್ಥಳದಲ್ಲಿ ತಯಾರುಮಾಡಿಲ್ಲ, ವಾಹನದ ಮಾಲೀಕರ ಮೇಲಿನ ದ್ವೇಷದಿಂದ ವಾಹನದ ಮೇಲೆ ಸುಳ್ಳು ಮೊಕದ್ದಮೆ ದಾಖಲಿಸಿಕೊಂಡಿರುತ್ತೇನೆ ಮತ್ತು ಮುಖ್ಯ ವಿಚಾರಣೆಯಲ್ಲಿ ಹೇಳಿದ ಸ್ಥಳದಲ್ಲಿ ಯಾವುದೇ ಘಟನೆ ನಡೆದಿಲ್ಲ ಎಂದರೆ ಸರಿಯಲ್ಲ ಹಾಗೂ ಸಾರಾಯಿ ಸ್ಯಾಚೇಟುಗಳನ್ನು ಅಧಿಕೃತ ಪರವಾನಿಗೆ ಮೇರೆಗೆ ಸಾಗಿಸಲಾಗುತ್ತಿತ್ತು ಮತ್ತು ಪರವಾನಿಗೆ ಪಡೆದು ಸಣ್ಣಪಾದೆ ಗಾಳಿಮುಖ ಹಾಗೂ ಮೆನಾಲ ಎಂಬಲ್ಲಿಗೆ ಜೀಪಿನಲ್ಲಿ ಸಾರಾಯಿ ಸ್ಯಾಚೇಟುಗಳನ್ನು ಸಾಗಿಸಲಾಗಿತು ಎಂದರೆ ಸುಳ್ಳು ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು,ತನಿಖಾಧಿಕಾರಿಯವರು ,ಸಹ ಸಾಕ್ಷಿದಾರರು ಹಾಗೂ ಮಾದರಿ ರವಾನೆದಾರರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳ ಮೇಲೆ ಹಾಗೂ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 22–1–2006ರಂದು ಜೀಪು ಸಂ:KL-14-C-421ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿ ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ,ಪುತ್ತೂರು ಇವರ ಪ್ರ.ಮಾ.ವ ಸಂ:10/2006 ದಿ:22–1–2006ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿ ಪ್ರಕಾರ ಸಾರಾಯಿ ಎಂದು ದೃಢ ಪಟ್ಟಿರುವುದು ಹಾಗೂ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಸಾರಾಯಿ ಅಧಿಕೃತ ರಹದಾರಿ ಮೂಲಕ ಸಾಗಾಟ ಮಾಡಲಾಗಿದೆ ಎಂದು ರಕ್ಷಣಾ ಪರ ವಕೀಲರು ದಾಖಲೆಗಳಲ್ಲಿ ಉಲ್ಲೇಖಿಸಿರುವರಾದರೂ ಪ್ರಾಧಿಕಾರದ ಮುಂದೆ ಅಭಿಯೋಗ ಅರೋಪಿಸಿದಂತೆ ಯಾವುದೇ ಅಕ್ರಮ ಕೃತ್ಯ ಮಾಡಿಲ್ಲ ಎಂಬುದನ್ನು ರಕ್ಷಣಾ ಸಾಕ್ಷ್ಯದೊಂದಿಗೆ ಪ್ರಾಧಿಕಾರದ ಮುಂದೆ ಹಾಜರಾಗಿ ಕರ್ನಾಟಕ ಅಬಕಾರಿ ಕಾಯಿದೆ 43ಬಿ ರಡಿಯಲ್ಲಿ ಹೇಳುವಂತಹ ರುಜುವಾತುವಿನ ಭಾರವನ್ನು ಸಮಂಜಸವಾಗಿ ನಿಭಾಯಿಸಿರುವುದಿಲ್ಲ. ಆದುದರಿಂದ ಅಭಿಯೋಜನ ಪರ ಮಂಡಿಸಿದ ಸಾಕ್ಷ್ಯಾಧಾರವನ್ನು ಅವಲಂಬಿಸಿ ವಾಹನದ ಮಾಲೀಕರ ವಿರುದ್ದ ಪ್ರತಿಕೂಲ ಭಾವನೆಯನ್ನು ಹೊಂದಿ ವಾಹನದ ಮಾಲೀಕರೇ ಈ ಕೃತ್ಯವನ್ನು ಎಸಗಿರುತ್ತಾರೆ ಎಂಬ ಬಗ್ಗೆ ನಿರ್ಣಯಕ್ಕೆ ಬರಲು ಸಾಕಷ್ಟು ವಿಷಯ ಸಾಮಾಗ್ರಿಗಳು ಕಂಡು ಬಂದಿರುವುದರಿಂದ ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿರುತ್ತದೆ.

ಇಂತಹ ಅಬಕಾರಿ ಸೊತ್ತುಗಳ ಅಕ್ರಮ ಸಾಗಾಣೆಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಬಳಸಲಾಗಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತು ಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ರಕ್ಷಣಾ ಸಾಕ್ಷಿ ಒದಗಿಸುವಂತೆ ಅವಕಾಶ ನೀಡಿದ್ದರೂ ಸಹ ರಕ್ಷಣಾ ಪರ ವಕೀಲರು ರಕ್ಷಣಾ ಸಾಕ್ಷಿ ಇಲ್ಲವೆಂದು ವಾದ ಮಂಡಿಸಿ ತನ್ನ ರುಜುವಾತು ಭಾರವನ್ನು ಸಮರ್ಪಕವಾಗಿ ನಿರ್ವಹಿಸದೇ ಇರುವುದರಿಂದ ವಾಹನವನ್ನು ತನ್ನ ಅರಿವೆಗೆ ಬಾರದೇ ಇಂತಹ ಅಕ್ರಮ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುತ್ತಾರೆ ಹಾಗೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷ್ಯವನ್ನು ನೀಡಲು ಮುಂದಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆಗೆ ತೊಡಗಿಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ದಿ:22–1–2006ರಂದು ಪೊಲೀಸ್ ಉಪ ನಿರೀಕ್ಷಕರು,ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ,ಪುತ್ತೂರು ಇವರು ಪ್ರಕರಣ ಸಂ: 10/2006ರಂತೆ ಅಕ್ರಮವಾಗಿ 100 ಮಿಲಿಯ 4600 ಸಾರಾಯಿ ಸ್ಯಾಚೇಟಗುಳನ್ನು ವಾಹನ ಸಂ: KL-14-C-421 ಜೀಪು ಇದರಲ್ಲಿ ಸಾಗಾಟ ಮಾಡಿರುವುದು ಸಾಭೀತಾಗಿದ್ದು, ಇದು ಕರ್ನಾಟಕ ಅಬಕಾರಿ 1965ರ ಕಲಂ 11,12,14 ರ ಪ್ರಕಾರ ಅಪರಾಧ ಹಾಗೂ 32,38(ಎ) ಮತ್ತು 43ಎ ರ ಪ್ರಕಾರ ಶಿಕ್ಷಾರ್ಹ ಅಪರಾಧವಾಗಿದ್ದು, ಕರ್ನಾಟಕ ಅಬಕಾರಿ ಕಾಯಿದೆ 43(ಎ)2ರಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ತೀರ್ಮಾನಿಸಬಹುದಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು,ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರ ತಕ್ಷೀರು ಸಂ:10/2006, ದಿ:22–1–2006ರಲ್ಲಿ ಜಪ್ತುಪಡಿಸಿರುವ ವಾಹನ ಜೀಪು ಸಂ: KL-14-C-421 (ಚಾಸೀಸ್ ಸಂ:MA1BA4ACYIGI3100 ಮತ್ತು ಇಂಜಿನ್ ಸಂ: ACY IGI0430) ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43 ಎ (2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 24–02–2011ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I : ಶ್ರೀಮತಿ.ಸುನೀತಾ,ಅ.ಉ.ನಿ (2),ಪುತ್ತೂರು ವಲಯ

ಪ್ರಾ.ಸಾ–2 : ಶ್ರೀ. ಪ್ರಕಾಶ್ ಕುಮಾರ್,ಅ.ರ, ಮಂಗಳೂರು ಉಪ ವಿಭಾಗ,ಮಂಗಳೂರು

ಪ್ರಾ.ಸಾ–3 : ಶ್ರೀ.ಉದಯ ಕುಮಾರ್,ಪಿ.ಸಿ.1038,ಪೂ.ಗ್ರಾ.ಪೊ.ಠಾಣೆ,ಪುತ್ತೂರು

ಪ್ರಾ.ಸಾ–4 : ಶ್ರೀ ಸುನೀಲ್ ವೈ ನಾಯಕ್, ಪೊ.ನಿ ,ಡಿಸಿಆರ್ಇ, ಸಿಐಡಿ, ಮಂಗಳೂರು

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

ನಿಶಾನೆ ಪಿ–I : ಪೊಲೀಸ್ ಅಧಿಕಾರಿಗಳ ವರದಿ ದಿ:28–3–06

ನಿಶಾನೆ ಪಿ–I ಎ : ಅದರ ಮೇಲಿನ ಸಾಕ್ಷಿ ಸಹಿ

ನಿಶಾನೆ ಪಿ–2 : ದಿ:10–4–2006ರ ತನಿಖಾದಿಕಾರಿಗಳ ವರದಿ

ನಿಶಾನೆ ಪಿ–2 ಎ : ಅದರ ಮೇಲಿನ ಸಾಕ್ಷಿ ಸಹಿ

ನಿಶಾನೆ ಪಿ–3 : ರಾಸಾಯನಿಕ ವಿಶ್ಲೇಷಣೆ ಕೋರಿಕೆ ಪತ್ರ

ನಿಶಾನೆ ಪಿ–4 : ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿ

ನಿಶಾನೆ ಪಿ–5 : ಕೋರಿಕೆ ಪತ್ರದ ಪ್ರತಿ

ನಿಶಾನೆ ಪಿ–6 : ರಾಸಾಯನಿಕ ತಜ್ಞರ ವರದಿ

ನಿಶಾನೆ ಪಿ–7 : ಮಹಜರು ಪ್ರತಿ

ನಿಶಾನೆ ಪಿ–7 ಎ : ಅದರ ಮೇಲಿನ ಸಹಿ

ನಿಶಾನೆ ಪಿ–8 : ಪೊಲೀಸ್ ಆಧಿಕಾರಿಗಳ ಸೊತ್ತು ಹಸ್ತಾಂತರ ಪತ್ರ

ನಿಶಾನೆ ಪಿ–8ಎ : ಅದರ ಮೇಲಿನ ಸಹಿ

ನಿಶಾನೆ ಪಿ–9 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–9ಎ : ಅದರ ಮೇಲಿನ ಸಹಿ

ನಿಶಾನೆ ಪಿ–10 : ಪಿ.ಎಫ್.ಪ್ರತಿ

**ಅನುಬಂಧ–III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :– –ಇರುವುದಿಲ್ಲ–

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :– ಇರುವುದಿಲ್ಲ–

**ಬಿ.ವಿ ಹೂವಪ್ಪ ಗೌಡ**

ಪಿ.ಆರ್.317 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/155/ಡಿಟಿಸಿಆರ್/2007–08, ದಿನಾಂಕ:24–03–2011**

**ಉಪಸ್ಥಿತರು:** ಬಿ.ವಿ ಹೂವಪ್ಪ ಗೌಡ,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

| **ಫಿರ್ಯಾದುದಾರರು:–** | **ಆರೋಪಿ /ವಾಹನದ ಮಾಲೀಕ** |
|---|---|
| ಪೊಲೀಸ್ ಉಪ ನಿರೀಕ್ಷಕರು | ಗೋಪಾಲ ಕೃಷ್ಣ, ಬಿನ್: ದೇವಯ್ಯ ಗೌಡ, |
| ಸುಳ್ಯ ಪೊಲೀಸ್ ಠಾಣೆ, ಸುಳ್ಯ | ಬಲ್ಯಖಾನ,ಪಟಕೋಡಿ ಮನೆ, ಸುಳ್ಯ ತಾಲೂಕು |

**ಪ್ರಕರಣದ ಮುಖ್ಯಾಂಶಗಳು:–**

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯರವರು ದಿ:01–10–2007 ರಂದು ರಾತ್ರಿ 9–30 ಗಂಟೆ ಸಮಯಕ್ಕೆ ಖಚಿತ ಮಾಹಿತಿಯ ಮೇರೆಗೆ ಸುಳ್ಯ ತಾಲೂಕು, ಮರ್ಕಂಜೆ ಗ್ರಾಮದ ಮಿತ್ತಡ್ಕ ಜೋಗಿಮೂಲೆ ಎಂಬಲ್ಲಿರುವ ದೇವಯ್ಯ ಗೌಡ ಎಂಬವರ ಅಂಗಡಿಯ ಪಕ್ಕದಲ್ಲಿ ಗಸ್ತು ತಿರುಗುತ್ತಿರುವಾಗ ವಾಹನ ಸಂ: KA-21-J-8123 ಮೋಟಾರ್ ಬೈಕಿನ ಮೇಲೆ ವ್ಯಕ್ತಿಯೋರ್ವನು ಕುಳಿತುಕೊಂಡು ಮದ್ಯ ತುಂಬಿದ ಬಾಟಲಿಗಳನ್ನು ಇತರ ವ್ಯಕ್ತಿಗಳಿಗೆ ಕೊಡುತ್ತಿದ್ದುದ್ದನ್ನು ಗಮನಿಸಿ ಆತನ ಬಳಿ ಹೋಗಿ ವಿಚಾರಿಸಲಾಗಿ ಸದ್ರಿ ವ್ಯಕ್ತಿಯು ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿರುವುದು ಕಂಡು ಬಂದು, ಮೋಟಾರ್ ಸೈಕಲಿನಲ್ಲಿದ್ದ ನೈಲಾನ್ ಚೀಲವನ್ನು ಪರಿಶೀಲಿಸಿದಾಗ ಅದರಲ್ಲಿ 180 ಮಿಲಿಯ ರಿಂಗ್ ಮಾಸ್ಟರ್

ಡಿಲಕ್ಸ್ ವಿಸ್ಕಿ ಎಂಬ ಮದ್ಯ ತುಂಬಿರುವ 27 ಪ್ಲಾಸ್ಟಿಕ್ ಬಾಟಲಿಗಳು ಇರುವುದು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 34ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ವಾಹನ ಹಾಗೂ ಮದ್ಯವನ್ನು ಜಪ್ತು ಪಡಿಸಿಕೊಂಡು, ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಪ್ರತ್ಯೇಕಿಸಿ ಮಹಜರು ಕ್ರಮ ಜರುಗಿಸಿ ಆರೋಪಿಯಾದ ಗೋಪಾಲ ಕೃಷ್ಣ, ಬಿನ್:ದೇವಯ್ಯ ಗೌಡ, ಬಲ್ಯಖಾನ, ಪಟ್ರಕೋಡಿ ಮನೆ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರ ವಿರುದ್ಧ ಕ್ರೈಂ ಸಂ: 175/2007, ದಿ:01–10–2007ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರ.ಮಾ. ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ದಾಖಲೆಗಳೊಂದಿಗೆ ಅಬಕಾರಿ ಉಪ ನಿರೀಕ್ಷಕರು(1), ಸುಳ್ಯ ಜಾರಿ ಮತ್ತು ತನಿಖೆ ಇವರಿಗೆ ಪ್ರಾಧಿಕಾರದ ದಿ:18–10–2007ರ ಅನುಮತಿಯಂತೆ ದಿ:6–11–2007 ರಂದು ಮುಂದಿನ ತನಿಖೆಗೆ ಹಸ್ತಾಂತರಿಸಿರುತ್ತಾರೆ .

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:–**

1) ನೈಲಾನ್ ಎರಡು ಕೈ ಹಿಡಿತವಿರುವ ಚೀಲದಲ್ಲಿ 180 ಎಂಎಲ್‌ನ ರಿಂಗ್ ಮಾಸ್ಟರ್ ಡಿಲಕ್ಸ್ ವಿಸ್ಕಿಯ 27 ಬಾಟಲಿಗಳಲ್ಲಿ ಒಟ್ಟು–4.860 ಲೀಟರು ಮದ್ಯ (180 ಎಂಎಲ್ ಒಂದು ಬಾಟಲಿಯನ್ನು ಮಾದರಿ ತೆಗೆಯಲಾಗಿದೆ)

2) ಬಜಾಜ್ ಕಂಪನಿಯ ಪಲ್ಸರ್ ಮೋಟಾರ್ ಸೈಕಲ್ ಸಂ: KA-21-J-8123

ಜಪ್ತಾದ ವಾಹನ ಪಲ್ಸರ್ ಮೋಟಾರ್ ಸೈಕಲ್ ಸಂ: KA-21-J-8123 ಇದರ ಮಾಲೀಕರೆಂದು ಹೇಳಿಕೊಂಡ ಶ್ರೀ.ಗೋಪಾಲಕೃಷ್ಣ , ಬಿನ್:ದೇವಯ್ಯ ಗೌಡ, ಬಲ್ಯಖಾನ, ಪಟ್ರಕೋಡಿ ಮನೆ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರು ತಮ್ಮ ವಕೀಲರ ಮೂಲಕ ದಿ:25–10–2007ರಂದು ಅರ್ಜಿ ಸಲ್ಲಿಸಿ, ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರ ಅರ್ಜಿಯ ವಿಚಾರಣೆ ಕೈಗೊಂಡು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ ಜಿಲ್ಲೆ, ಮಂಗಳೂರು ಇವರ ಪ್ರಾಧಿಕಾರದಿಂದ ದಿ:12–12–2007 ರಂದು ಹೊರಡಿಸಿದ ಮದ್ಯಂತರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ಪುರಸ್ಕರಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನಕ್ಕೆ ನಿಗಧಿಪಡಿಸಿರುವ ಮೊತ್ತಕ್ಕೆ ಸಮಾನವಾದ ರೂ.17,500/– ಬ್ಯಾಂಕ್ ಗ್ಯಾರೆಂಟಿಯನ್ನು ಭದ್ರತೆಯಾಗಿ ಒದಗಿಸುವ ಹಾಗೂ ಇತರೆ ಷರತ್ತುಗಳ ಮೇಲೆ ವಾಹನವನ್ನು ಮಾಲೀಕರ ಸುಪರ್ಧಿಗೆ ಬಿಡುಗಡೆಗೊಳಿಸಲು ಆದೇಶಿಸಲಾಗಿರುತ್ತದೆ. ಸದ್ರಿ ಅದೇಶದಂತೆ ವಾಹನದ ಮಾಲೀಕರು ರೂ.17,500/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಕೆನರಾ ಬ್ಯಾಂಕ್, ಸುಳ್ಯ ಶಾಖೆ ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿರುವ ಮೇರೆಗೆ ವಾಹನವನ್ನು ವಾಹನದ ಮಾಲೀಕರಿಗೆ ಬಿಡುಗಡೆಗೊಳಿಸಲಾಗಿರುತ್ತದೆ. ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:01–01–2010 ರವರೆಗೆ ಊರ್ಜಿತದಲ್ಲಿದ್ದು, ತದನಂತರದಲ್ಲಿ ಬ್ಯಾಂಕ್ ಗ್ಯಾರೆಂಟಿಯನ್ನು ಇನ್‌ವೋಕ್ ಮಾಡಿಕೊಂಡು ಅಡಕವಾಗಿರುವ ಮೊತ್ತವನ್ನು ಸರ್ಕಾರದ ರೆವೆನ್ಯೂ ಡೆಪಾಸಿಟ್ ಖಾತೆಯಲ್ಲಿ ಚಲನ್ ಸಂ:145, ದಿ:8–1–2010ರಂದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ , ಮಂಗಳೂರು ಶಾಖೆಯಲ್ಲಿ ಜಮೆಮಾಡಲಾಗಿರುತ್ತದೆ.

ತನಿಖಾದಿಕಾರಿಗಳು ಪ್ರಕರಣದಲ್ಲಿ ತನಿಖೆ ಕೈಗೊಂಡು ಜಪ್ತಾದ ವಾಹನ ಪಲ್ಸರ್ ಮೋಟಾರ್ ಸೈಕಲ್ ನೋಂದಣಿ ಸಂ:KA-21-J-8123 ಇದರ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಸ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಶ್ರೀ.ಪಿ.ಡಿ.ಗೋಪಾಲಕೃಷ್ಣ ಗೌಡ, ಬಿನ್:ಪಿ.ಸಿ ದೇವಯ್ಯ ಗೌಡ, ಡೋರ್ ನಂ:1–199, ಪಟ್ರಕೋಡಿ ,ಬಲ್ಯಖಾನ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರು ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ಹಾಗೂ ಮೆ:ಬಜಾಜ್ ಆಟೋ ಫೈನಾನ್ಸ್, ಪುಣೆ ಇವರು ವಾಹನದ ಹೆಚ್.ಪಿ.ಎ ದಾರರಾಗಿರುವುದಾಗಿ ದೃಡಪಟ್ಟಿರುವ ಮೇರೆಗೆ ಪ್ರಕರಣದ ಆರೋಪಿತ/ವಾಹನದ ಮಾಲೀಕರಿಗೆ ಹಾಗೂ ಹೆಚ್.ಪಿ.ಎ ದಾರರಿಗೆ ಈ ಪ್ರಾಧಿಕಾರದಿಂದ ದಿ:18–3–2008 ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ರ ಪ್ರಕಾರ ಕಾರಣ ಕೇಳಿ ನೋಟಿಸು ನೀಡಲಾಗಿದ್ದು,ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರಿಗೆ ದಿ:29–3–2008ರಂದು ಜ್ಯಾರಿಯಾಗಿದ್ದು, ಆರೋಪಿತ ವ್ಯಕ್ತಿ / ವಾಹನದ ಮಾಲೀಕರು ದಿ:3–4–2008ರಂದು ಉತ್ತರಿಸುತ್ತಾ, ಕಾನೂನಿನ ತಿಳುವಳಿಕೆ ಇಲ್ಲದೇ ವಾಹನದಲ್ಲಿ ಮದ್ಯವನ್ನು ಸಾಗಾಟ ಮಾಡಲಾಗಿದ್ದು ಪ್ರಕರಣವನ್ನು ಮುಕ್ತಾಯಗೊಳಿಸಿ ಪ್ರಕರಣ ಖುಲಾಸೆಗೊಳಿಸಿ ವಾಹನವನ್ನು ಮುಟ್ಟು ಗೋಲು ಹಾಕಿಕೊಳ್ಳದೇ ಹಿಂದಕ್ಕೆ ನೀಡುವಂತೆ ಮನವಿ ಒಪ್ಪಿಸಿರುತ್ತಾರೆ.

ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳನ್ನು ಪ್ರಕರಣ ಪತ್ತೆಹಚ್ಚಿದ ಪೊಲೀಸ್ ಆಧಿಕಾರಿಗಳೇ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ಕರ್ನಾಟಕ ಸರ್ಕಾರದ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಂದ ಪಡೆದ ರಾ.ವಿ ಸಂ:ಇಎಕ್ಸ್‌ಇ–330, ದಿ:3–11–2007 ರ ಪ್ರತಿಯನ್ನು ಪ್ರಕರಣದ ತನಿಖಾದಿಕಾರಿಗಳ ತನಿಖಾ ವರದಿ ಸಂ: ಜಾತ / ಸಿಆರ್‌ಎಂ/23/2007–08 ದಿ:6–2–2008ರ ಜೊತೆಯಲ್ಲಿ ಪ್ರಾಧಿಕಾರಕ್ಕೆ ಒಪ್ಪಿಸಿ ಜಪ್ತುಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವುದರಿಂದ ಹಾಗೂ ಮಾದರಿ ವಿಶ್ಲೇಷಣಾ ವರದಿಯಲ್ಲಿ ಮದ್ಯದ ಮಾದರಿಗಳಲ್ಲಿ ಮದ್ಯಸಾರದ ಅಂಶವು 42.5 ಡಿಗ್ರಿ ಪತ್ತೆಯಾಗಿ ಮಾದರಿಗಳು ಭಾರತೀಯ ಮಾನಕ ಬ್ಯುರ್ಯೋದ ಅಂಶಗಳಿಗೆ ಅನುಗುಣವಾಗಿರುವುದರಿಂದ ಸದ್ರಿ ಮದ್ಯವನ್ನು (ಮಾದರಿಗಳನ್ನು ಹೊರತು ಪಡಿಸಿ) ದಿ:19–3–2008ರಂದು ಹೊರಡಿಸಿದ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಪ್ರಸ್ತುತ ಚಾಲ್ತಿಯಲ್ಲಿರುವ ಸರ್ಕಾರದ ಅದೇಶದಂತೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ನಾಶಪಡಿಸಲು ಆದೇಶಿಸಲಾಗಿರುತ್ತದೆ. ಅದರಂತೆ ಮದ್ಯವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ಸಮಕ್ಷಮದಲ್ಲಿ ನಾಶಪಡಿಸಲಾಗಿರುತ್ತದೆ.

ನಂತರ ಪ್ರಕರಣದಲ್ಲಿ ವಿಚಾರಣೆಯನ್ನು ಪ್ರಾರಂಬಿಸಿ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅಭಿಯೋಗದ ಪರ ಸಾಕ್ಷಿಗಳು ಹಾಗೂ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷಾಧ್ಯಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ: 1–10–2007 ರಂದು ಪಲ್ಸರ್ ಮೋಟಾರ್ ಸೈಕಲ್ ನೋಂದಣಿ ಸಂ: KA-21-J-8123 ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯಗಳ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

3) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಪ್ರಕರಣದ ಸ್ವತಂತ್ರ ಸಾಕ್ಷಿದಾರರಾದ ಶ್ರೀ.ರವಿಕುಮಾರ್.ಬಿ,ಬಿನ್:ಮೋನಪ್ಪ ಪೂಜಾರಿ , ಮರ್ಕಂಜೆ ಗ್ರಾಮ,ಬಲ್ಲಕಾನ ಮನೆ, ಸುಳ್ಯ ತಾಲೂಕು ಇವರು ದಿ:3–6–2009 ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ಪೊಲೀಸರು ಮರ್ಕಂಜೆ ಗ್ರಾಮದಲ್ಲಿ ಆರೋಪಿ ವಶದಿಂದ ವಿಸ್ಕಿಯನ್ನು ಅಮಾನತ್ತುಪಡಿಸಿದ ವಿಚಾರ ನನಗೆ ಗೊತ್ತಿಲ್ಲ, ಪೊಲೀಸರು ನನ್ನ ಸಮಕ್ಷಮ ಮಹಜರು ಬರೆದಿಲ್ಲ, ಮಹಜರಿಗೆ ನಾನು ಪೊಲೀಸ್ ಠಾಣೆಯಲ್ಲಿ ಸಹಿ ಮಾಡಿರುತ್ತೇನೆ. ಮಹಜರಿನಲ್ಲಿ ಏನು ಬರೆದಿರುವರು ಎಂದು ನನಗೆ ಗೊತ್ತಿಲ್ಲ, ಪ್ರಕರಣದಲ್ಲಿ ತಿಳಿಸಿರುವ ಮದ್ಯ ಮತ್ತು ವಾಹನವನ್ನು ತನ್ನ ಸಮಕ್ಷಮ ಅಮಾನತುಪಡಿಸಿಕೊಂಡು ಮಹಜರು ಬರೆದಿರುತ್ತಾರೆ ಎಂದರೆ ಸರಿಯಲ್ಲ, ತಾನು ಮತ್ತು ಆರೋಪಿ ಗೋಪಾಲಕೃಷ್ಣ ಒಂದೇ ಪ್ರದೇಶದ ನಿವಾಸಿಗಳಾದ್ದರಿಂದ ಆರೋಪಿ ಮತ್ತು ವಾಹನದ ಮಾಲೀಕರಿಗೆ ಸಹಾಯ ಮಾಡಲು ಸುಳ್ಳು ಸಾಕ್ಷಿ ಹೇಳುತ್ತೇನೆ ಎಂದರೆ ಸರಿಯಲ್ಲ ಎಂದು ನುಡಿಯುತ್ತ ಅಭಿಯೋಗದ ಪರ ಪ್ರತಿಕೂಲ ಸಾಕ್ಷ್ಯ ನೀಡಿ ಮಹಜರನ್ನು ಮತ್ತು ಅದರ ಮೇಲಿನ ತನ್ನ ಸಹಿಯನ್ನು ಅನುಕ್ರಮವಾಗಿ ನಿಶಾನೆ ಪಿ–1 ಮತ್ತು ನಿಶಾನೆ ಪಿ–1 ಎ ಎಂದು ಗುರುತಿಸಿ ಸಾಕ್ಷ್ಯ ನುಡಿದಿರುತ್ತಾರೆ.

**ಪ್ರಾ.ಸಾ–2:–**

ಪ್ರಕರಣದ ಸ್ವತಂತ್ರ ಸಾಕ್ಷಿದಾರರಾದ ಶ್ರೀ.ಮೋಹನ್, ಹೊಸಳಿಕೆ ಮನೆ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರು ದಿ:3–6–2009ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ತನಗೆ ಗೋಪಾಲಕೃಷ್ಣ ಅವರ ಪರಿಚಯವಿಲ್ಲ, ಪೊಲೀಸರು ತನಗೆ 1 ವರ್ಷದ ಹಿಂದೆ ಠಾಣೆಗೆ ಬರಲು ಹೇಳಿದ್ದು, ಠಾಣೆಗೆ ಹೋಗಿ ಸಹಿ ಮಾಡಿರುತ್ತೇನೆ. ಪೊಲೀಸರು ತನ್ನ ಸಮಕ್ಷಮ ವಾಹನ ಮತ್ತು ಮದ್ಯವನ್ನು ಜಪ್ತುಪಡಿಸಿಕೊಂಡಿಲ್ಲ, ಮದ್ಯ ಸಾಗಾಟಕ್ಕೆ ಉಪಯೋಗಿಸಿದ ಬಜಾಜ್ ಪಲ್ಸರ್ ಬೈಕನ್ನು ಅಮಾನತುಪಡಿಸಿಕೊಂಡು ನಿಶಾನೆ ಪಿ–1ರಂತೆ ಮಹಜರು ಬರೆದಿದ್ದಾರೆ ಎಂದರೆ ಸರಿಯಲ್ಲ, ವಾಹನದ ಮಾಲೀಕರಿಗೆ ಸಹಾಯ ಮಾಡಲು ತಾನು ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ನುಡಿಯುತ್ತ ಅಭಿಯೋಗದ ಪರ ಪ್ರತಿಕೂಲ ಸಾಕ್ಷಿ ನೀಡಿ, ಸಾಕ್ಷಿಯ ಸಹಿಯನ್ನು ನಿಶಾನೆ ಪಿ–1 ಬಿ ಎಂದು ಗುರುತಿಸಿ ಸಾಕ್ಷ್ಯ ನುಡಿದಿರುತ್ತಾರೆ.

**ಪ್ರಾ.ಸಾ –3**

ಶ್ರೀ.ಮಂಜುನಾಥ ಹೆಗ್ಡೆ, ಪಿ.ಸಿ ನಂ:398 ಕಾವೂರು ಪೊಲೀಸ್ ಠಾಣೆ ಇವರು ಫಿರ್ಯಾದುದಾರರೊಂದಿಗೆ ಅಪರಾಧ ನಡೆದ ಸ್ಥಳದಲ್ಲಿದ್ದು ಮಹಜರು ಸಾಕ್ಷಿದಾರರಾಗಿ ದಿನಾಂಕ:23–3–2010ರಂದು ಸಾಕ್ಷಿ ನೀಡುತ್ತಾ ಅಪರಾದ ಎಸಗಿದ ವ್ಯಕ್ತಿ ಬೈಕ್‌ನಲ್ಲಿ ಮದ್ಯದ ಬಾಟಲಿಗಳನ್ನು ಮಾರಾಟ ಮಾಡುತ್ತಿದ್ದು ಸಮವಸ್ತ್ರದಲ್ಲಿದ್ದ ನಮ್ಮನ್ನು ಕಂಡು ಓಡಲು ಪ್ರಯತ್ನಿಸಿದಾಗ ಅತನನ್ನು ತಡೆದು ವಿಚಾರಿಸಲಾಗಿ ಗೋಪಾಲ ಕೃಷ್ಣ ಎಂಬುದಾಗಿ ತಿಳಿದುಬಂದಿದ್ದು ಮದ್ಯದ ಬಾಟಲಿಗಳನ್ನು ಹೊಂದಲು ಮತ್ತು ಮಾರಾಟ ಮಾಡಲು ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿರುತ್ತಾನೆ, ನಂತರ ಜಪ್ತು ಪಡಿಸಿದ ಮದ್ಯದ ಬಾಟಲಿಗಳ ಪೈಕಿ ಒಂದು ಬಾಟಲಿಯನ್ನು ಸ್ಯಾಂಪಲ್ ಗಾಗಿ ತೆಗೆದಿರಿಸಿ ಬಿಳಿ ಬಟ್ಟೆ ಕಟ್ಟಿ ಮೊಹರು ಕ್ರಮ ಜರುಗಿಸಿ ಪಂಚರ ಸಮಕ್ಷಮ ಮಹಜರು ತಯಾರಿಸಲಾಯಿತು ಎಂದು ಸಾಕ್ಷಿ ನೀಡುತ್ತಾ ಮಹಜರಿನ ನಿಶಾನೆ ಪಿ–1 ರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ ಪಿ–1 ಸಿ ಎಂದೂ, ಸ್ಥಳದಲ್ಲಿಯೇ ತಯಾರಿಸಿದ ಮಾದರಿ ಮೊಹರು ನಿಶಾನೆ ಪಿ–2 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ನಂತರ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ಮಾಹಿತಿಯನ್ನು ದಾಖಲಿಸಿರುವುದು ,ಪ್ರಕರಣದಲ್ಲಿ ಮದ್ಯ ಮತ್ತು ಮೋಟಾರ್ ಸೈಕಲನ್ನು ವಶಪಡಿಸಿಕೊಂಡಿರುವ ಬಗ್ಗೆ ಸಾಕ್ಷ್ಯ ನೀಡುತ್ತಾ ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸಾ –4**

ಶ್ರೀ.ಸಿ.ಸತೀಶ್ ಎನ್.ಪಿ.ಸಿ,ಸುಳ್ಯ ಪೊಲೀಸ್ ಠಾಣೆ ಇವರು ಫಿರ್ಯಾದುದಾರರೊಂದಿಗೆ ಅಪರಾಧ ನಡೆದ ಸ್ಥಳದಲ್ಲಿದ್ದು ಮಹಜರು ಸಾಕ್ಷಿದಾರರಾಗಿ ದಿ:23–3–2010 ರಂದು ಸಾಕ್ಷಿ ನೀಡುತ್ತಾ ಆರೋಪಿತನು ಮೋಟಾರ್ ಬೈಕ್‌ನಲ್ಲಿ ನೈಲಾನ್ ಚೀಲದಲ್ಲಿ ಮದ್ಯದ ಬಾಟಲಿಗಳನ್ನು ಇಟ್ಟುಕೊಂಡು ಮಾರಾಟ ಮಾಡುತ್ತಿರುವುದನ್ನು ಕಂಡು ಆತನ ಬಳಿಗೆ ಹೋದಾಗ ಸಮವಸ್ತ್ರದಲ್ಲಿದ್ದ ನಮ್ಮನ್ನು ಕಂಡು ಓಡಲು ಪ್ರಯತ್ನಿಸಿದಾಗ ಅತನನ್ನು ತಡೆದು ವಿಚಾರಿಸಲಾಗಿ ಗೋಪಾಲ ಕೃಷ್ಣ ಎಂಬುದಾಗಿ ತಿಳಿದುಬಂದಿದ್ದು, ಮೋಟಾರ್ ಸೈಕಲ್‌ನಲ್ಲಿದ್ದ ಚೀಲವನ್ನು ಪರಿಶೀಲಿಸಿದಾಗ 180 ಎಂಎಲ್‌ನ 27 ಬಾಟಲಿಗಳು ಇರುವುದು ಕಂಡು ಬಂದಿದ್ದು, ಸದ್ರಿ ಮದ್ಯ ಹೊಂದಲು ಮತ್ತು ಮಾರಾಟ ಮಾಡಲು ಯಾವುದೇ ಪರವಾನಿಗೆ ಇಲ್ಲವೆಂದು ಅರೋಪಿತನು ತಿಳಿಸಿದ ಮೇರೆಗೆ ಮೋಟಾರ್ ಸೈಕಲ್ ಮತ್ತು ಮದ್ಯದ ಬಾಟಲಿಗಳನ್ನು ಜಪ್ತುಪಡಿಸಿಕೊಂಡು ಮದ್ಯದ ಬಾಟಲಿಯಿಂದ ಒಂದು ಬಾಟಲಿಯನ್ನು ಸ್ಯಾಂಪಲ್‌ಗಾಗಿ ಮಾದರಿ ತೆಗೆಯಲಾಯಿತ್ತು ಎಂದು ಸಾಕ್ಷಿ ನೀಡುತ್ತಾ, ಮಹಜರಿನ ನಿಶಾನೆ ಪಿ–1ರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ ಪಿ–1 ಬಿ ಎಂದೂ, ಸ್ಥಳದಲ್ಲಿಯೇ ತಯಾರಿಸಿದ ಮಾದರಿ ಮೊಹರು ನಿಶಾನೆ ಪಿ–2 ಎಂದು ಗುರುತಿಸಿರುತ್ತಾರೆ. ನಂತರ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ಮಾಹಿತಿಯನ್ನು ದಾಖಲಿಸಿ ಮದ್ಯ ಮತ್ತು ಮೋಟಾರ್ ಸೈಕಲನ್ನು ವಶಪಡಿಸಿಕೊಂಡಿರುವ ಬಗ್ಗೆ ಸಾಕ್ಷ್ಯ ನೀಡುತ್ತಾ ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸಾ –5**

ಶ್ರೀಮತಿ.ಗೀತಾ, ಅ.ನಿ ಮೆ:ಸಿಂಗಲ್ ಮಾಲ್ಟ್ ಸ್ಪಿರಿಟ್ಸ್, ಬೈಕಂಪಾಡಿ ಮಂಗಳೂರು ಇವರು ಪ್ರಕರಣದ ತನಿಖೆ ಕೈಗೊಂಡ ದಿನಾಂಕ: 19–10–2010ರಂದು ಸಾಕ್ಷಿ ನೀಡುತ್ತಾ ಪ್ರಕರಣ ಸಂ:17/2007ಕ್ಕೆ ಸಂಬಂದಿಸಿದ ಮದ್ಯದ ಬಾಟಲಿಗಳನ್ನು ಮೋಟಾರ್ ಸೈಕಲ್‌ಗಳನ್ನು ಅಧಿಕೃತ ಅಧಿಕಾರಿಗಳ ಅದೇಶದಂತೆ ಪಡೆದುಕೊಂಡು ತನಿಖೆ ಕೈಗೊಂಡು ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ, ಸೊತ್ತುಗಳನ್ನು ವಿಲೇವಾರಿಗೊಳಿಸುವ ಬಗ್ಗೆ ಅಧಿಕೃತ ಅಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸುವ ಬಗ್ಗೆ ಸಾಕ್ಷಿ ವಿಚಾರಣೆ ವೇಳೆಯಲ್ಲಿ ಹೇಳಿಕೆ ನೀಡುತ್ತ ಪ್ರಾಧಿಕಾರಕ್ಕೆ ಸಲ್ಲಿಸಿರುವ ತನಿಖಾ ವರದಿಯನ್ನು ನಿಶಾನೆ ಪಿ–4 ಎಂದೂ, ಅವರ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಿರುತ್ತಾರೆ. ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ಪ್ರಕರಣದ ಸೊತ್ತು ಮತ್ತು ದಾಖಲೆಗಳನ್ನು ಪಡೆದುಕೊಂಡು ತನಿಖೆ ಮುಂದುವರಿಸಿ ಸೊತ್ತು ವಿಲೇಯ ಬಗ್ಗೆ ಶಿಪಾರಸ್ಸು ವರದಿ ಸಲ್ಲಿಸುವವರೆಗಿನ ಅಂಶಗಳನ್ನು ಸ್ಪಷ್ಟಪಡಿಸಿರುತ್ತಾರೆ.

**ಡಿಡಬ್ಲ್ಯೂ–1**

ರಕ್ಷಣಾ ಪರ ಸಾಕ್ಷಿದಾರರಾದ ಶ್ರೀ.ಪಿ.ಡಿ.ಗೋಪಾಲಕೃಷ್ಣ ಗೌಡ ,ಬಿನ್:ಪಿ.ಸಿ ದೇವಯ್ಯ ಗೌಡ, ಡೋರ್ ನಂ:1–199, ಪಟ್ರಕೋಡಿ ,ಬಲ್ಯಖಾನ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರು ದಿ:27–1–2011ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ನೀಡುತ್ತಾ , ತಾನು ವಾಹನದ ಮಾಲೀಕನಾಗಿದ್ದು,ಪ್ರಕರಣವು ಸುಳ್ಳಾಗಿದ್ದು ತಾನು ಯಾವತ್ತು ಬೈಕ್‌ನಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಮಾಡಿರುವುದಿಲ್ಲ ಹಾಗೂ ಪ್ರಾದಿಕಾರದಿಂದ ಕೇಳಲಾದ ಕಾರಣ ಕೇಳಿ ನೋಟಿಸಿಗೆ ಸ್ಪಷ್ಟ ಉತ್ತರವನ್ನು ನೀಡಿರುತ್ತೇನೆ. ಹಾಗೂ ವಶಪಡಿಸಿಕೊಳ್ಳಲಾದ ಬೈಕನ್ನು ಹಿಂತಿರುಗಿಸಿಕೊಡುವಂತೆ ಪ್ರಾದಿಕಾರದ ಮುಂದೆ ವಿನಂತಿಸಿಕೊಂಡಿರುತ್ತಾರೆ.

ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತ ಪೊಲೀಸರು ಯಾವುದೋ ರಾಜಕೀಯ ದ್ವೇಷ ಕಾರಣದಿಂದ ತನ್ನ ಮೇಲೆ ಪ್ರಕರಣ ದಾಖಲಿಸಿರುತ್ತಾರೆ. ಪರವಾನಿಗೆ ಇಲ್ಲದೇ ಮದ್ಯವನ್ನು ಮಾರಾಟ ಮಾಡಲಾಗಿದೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಪ್ರಕರಣದಲ್ಲಿ ಇತ್ತಂಡಗಳ ವಾದ ವಿವಾದವನ್ನು ಅಲಿಸಲಾಗಿ ರಕ್ಷಣಾ ಪರ ವಕೀಲರು ವಾದ ಮಂಡಿಸುತ್ತ ಪ್ರಾ.ಸಾ –1 ರಿಂದ 4ರವರೆಗಿನ ಹೇಳಿಕೆಗಳು ತಾಳೆ ಕಂಡುಬಂದಿರುವುದಿಲ್ಲ ಹಾಗೂ ಸ್ವತಂತ್ರ ಸಾಕ್ಷಿದಾರರುಗಳು ಪ್ರತಿಕೂಲ ಹೇಳಿಕೆಗಳನ್ನು ನೀಡಿರುವುದು ಮತ್ತು ಪ್ರಕರಣ ದಾಖಲೆ ಸಂದರ್ಭದಲ್ಲಿ ಸರ್ಚ್ ವಾರೆಂಟ್ ಪಡೆಯದೇ ಇರುವುದರಿಂದ ಪ್ರಕರಣವನ್ನು ಕೈಬಿಡಬೇಕೆಂದು ರಕ್ಷಣಾ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸಹಾಯಕ ಅಭಿಯೋಗ ನಿರ್ದೇಶಕರು ಪ್ರತಿವಾದ ಮಂಡಿಸುತ್ತ ಪ್ರಕರಣವು ಯಾವುದೇ ಕ್ರಿಮಿನಲ್ ಪ್ರಕರಣವಾಗಿರದೇ, ಮುಟ್ಟುಗೋಲು ನಡವಳಿಯಾಗಿರುವುದರಿಂದ ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳ ಸಾಕ್ಷ್ಯದಲ್ಲಿ ಕೆಲವೊಂದು ಸಣ್ಣಪುಟ್ಟ ವ್ಯತಿರೀಕ್ತತೆಗಳು ಕಂಡುಬಂದರೂ ಅದು ಅಭಿಯೋಜನೆಗೆ ಮಾರಕವಾಗುವುದಿಲ್ಲ ಹಾಗೂ ವ್ಯತಿರೀಕ್ತತೆಗಳು ಸಾಕ್ಷಿಗಳ ಸಾಕ್ಷ್ಯದಲ್ಲಿ ಸರ್ವೆ ಸಾಮಾನ್ಯವಾಗಿರುತ್ತದೆ. ಭಾರತೀಯ ಸಾಕ್ಷ್ಯ ಅಧಿನಿಯಮ ಕಲಂ 3ರಡಿ ಮೌಖಿಕ ಸಾಕ್ಷ್ಯವನ್ನು ವಿಚಾರಣೆ ಮಾಡಿದಾಗ ಸಾಕ್ಷ್ಯವು ಗುಣಾತ್ಮಕವಾಗಿರಬೇಕೇ ಹೊರತು ಸಾಕ್ಷ್ಯದ ಒಟ್ಟು ಪ್ರಮಾಣವನ್ನು ಗಣನೆಗೆ ತೆಗೆದು ಕೊಳ್ಳಲಾರದು. ಯಾವುದೇ ಒಂದು ಸಂಗತಿಯನ್ನು ಕಾನೂನಡಿ ಸಾಬೀತುಪಡಿಸಬೇಕಾದರೆ ಒಂದು ನಿರ್ಧಿಷ್ಟ ಪ್ರಮಾಣದ ಸಾಕ್ಷಿಗಳು ಬೇಕು ಎಂಬಂತೆ ಕಾನೂನು ಅಂಶ ಇರುವುದಿಲ್ಲ. ಈ ಕಾನೂನಿನ ಅಂಶವನ್ನು ಭಾರತೀಯ ಸಾಕ್ಷ್ಯ ಅಧಿನಿಯಮದ ಕಲಂ 134ರಡಿ ಸ್ಪಷ್ಟ ಪಡಿಸಲಾಗಿರುವುದು.ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳು ಪ್ರಕರಣವನ್ನು ಪತ್ತೆಹಚ್ಚಿ ಮುಂದಿನ ತನಿಖೆ ನಡೆಸಿ ಅರೋಪಿ /ವಾಹನದ ಮಾಲೀಕರು ತನ್ನ ವಾಹನವನ್ನು ಈ ಕೃತ್ಯದಲ್ಲಿ ನಿಯೋಜಿಸಿರುವುದು ಅಕ್ರಮವಾಗಿದ್ದು ಯಾವುದೇ ಮುಂಜಾಗತ್ರೆಯನ್ನು ತೆಗೆದುಕೊಳ್ಳದೇ ಇರುವುದು ಸಾಭೀತಾಗಿರುತ್ತದೆ. ಈ ಬಗ್ಗೆ ಇಲಾಖಾ ಸಾಕ್ಷಿಗಳು ಬಹಳ ಸ್ಪಷ್ಟವಾಗಿ ಹಾಗೂ ತಮ್ಮ ಕರ್ತವ್ಯದ ನೆಲೆಯಲ್ಲಿ ಪ್ರಮಾಣೀಕರವಾಗಿ ಸಾಕ್ಷ್ಯ ನೀಡಿರುವುದರಿಂದ ಸ್ವತಂತ್ರ ಸಾಕ್ಷಿಗಳು ಪ್ರತಿಕೂಲವಾದರೂ ಕೂಡಾ ಅಭಿಯೋಗಕ್ಕೆ ಈ ಅಂಶದಿಂದ ಯಾವುದೇ ರೀತಿಯಲ್ಲಿ ಮಾರಕವಾಗುವುದಿಲ್ಲ. ವಾಹನದ ಮಾಲೀಕರು ವಿಚಾರಣಾ ವೇಳೆಯಲ್ಲಿ ತನ್ನ ರಕ್ಷಣಾ ಸಾಕ್ಷ್ಯ ಹೇಳಿಕೊಂಡಿದ್ದರೂ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಲಾಗಿಲ್ಲ ಎಂಬ ಆಂಶದ ಬಗ್ಗೆ ಸೂಕ್ತ ಪುರಾವೆಗಳನ್ನು ಒದಗಿಸಿ ತನ್ನ ನಿರಾಪರಾಧಿತ್ವವನ್ನು ಸಾಭೀತುಪಡಿಸಿರುವುದಿಲ್ಲ. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ಯಲ್ಲಿ ಹೇಳಿದ ರುಜುವಾತಿನ ಭಾರವನ್ನು ವಾಹನದ ಮಾಲೀಕರು ನಿಭಾಯಿಸುವಲ್ಲಿ ವಿಫಲರಾಗಿರುವುದು ಸಾಭೀತುಪಡಿಸುತ್ತದೆ. ವಾಹನ ಶೋಧನೆ ಸಂದರ್ಭದಲ್ಲಿ ಕಲಂ 53ರಡಿ ಶೋಧನಾ ವಾರೆಂಟನ್ನು ಪಡೆಯದೇ ಇರುವುದು ಅಭಿಯೋಗದ ವಿಫಲತೆ ಎಂಬುದಾಗಿ ಪರಿಗಣಿಸಲಾಗದು. ಏಕೆಂದರೆ ಕಲಂ 54 ರಡಿ ರೆರ್ಕಾಡ್ ಆಫ್ ರೀಜನ್ಸ್ ನ್ನು ದಾಖಲಿಸದೇ ಇರುವುದು ಕಾನೂನಡಿ ಅಜ್ಞಾಪಕವಾಗಿರುವುದಿಲ್ಲ ಎಂಬುದನ್ನು ಈ ಕೆಳಕಂಡಂತೆ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪನ್ನು ಆಧರಿಸಿ ವ್ಯಾಖ್ಯಾನಿಸಬೇಕಾಗಿರುತ್ತದೆ. ಶೋಧನಾ ವಾರೆಂಟ್‌ಗಳನ್ನು ಪಡೆಯಲು ವಿಫಲರಾದ ಬಗ್ಗೆ ಕಾರಣಗಳನ್ನು ದಾಖಲಿಸದೇ ಇರುವುದು ಕೇವಲ ಕಾನೂನಿನ ಪ್ರಕ್ರಿಯೆಯಲ್ಲಿ ಒಂದು ಅನಿಯಮತೆಯಾಗಿದ್ದು ಕೇವಲ ಅದೇ ಒಂದು ಕಾರಣದಡಿ ಇಡೀ ಶೋಧನೆಯನ್ನು ಅಥವಾ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಪ್ರಾದಿಕಾರವು ಮಾಡಿದ ಅಂತಿಮ ಮುಟ್ಟುಗೋಲು ಅದೇಶವನ್ನು ಕಾನೂನಿನಡಿ ಅಸಿಂಧುವೆಂದು ಘೋಷಿಸಲು ಬರುವುದಿಲ್ಲ. ಶೋಧನೆಯನ್ನು ಮಾಡುವ ಮೊದಲು ವಾರೆಂಟ್ ಪಡೆದು ಕೊಳ್ಳದೇ ಇರುವ ಬಗ್ಗೆ ಅಥವಾ ವಾರೆಂಟ್ ಪಡೆಯಲು ವಿಫಲರಾದ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ಕಾರಣಗಳನ್ನು ದಾಖಲಿಸದೇ ಇರುವುದು ಅರೋಪಿಯ ಹಕ್ಕಿಗೆ ಅಥವಾ ಆತನ ಹಿತಾಸಕ್ತಿಗೆ ದಕ್ಕೆಯನ್ನು ಉಂಟು ಮಾಡುತ್ತದೆ ಎಂಬುದಾಗಿ ಅರೋಪಿ ತೋರಿಸಿ ಕೊಡಬೇಕಾಗುತ್ತದೆ. ಶೋಧನಾ ವಾರೆಂಟನ್ನು ಪಡೆಯಲೇ ಬೇಕು ಎಂಬುದು ಖಡ್ಡಾಯವಾಗಿರುವುದಿಲ್ಲ ಅಥವಾ ಅಜ್ಞಾಪಕವಾಗಿರುವುದಿಲ್ಲ. ಶೋಧನಾ ವಾರೆಂಟನ್ನು ಪಡೆದುಕೊಳ್ಳಲು ವಿಫಲರಾದ ಬಗ್ಗೆ ಕಾರಣಗಳನ್ನು ನಮೂದಿಸದೇ ಇರುವುದು ಇಡೀ ಶೋಧನೆ ಮತ್ತು ಅದರ ನಂತರದ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಅಂತಿಮ ಮುಟ್ಟುಗೋಲು ಆದೇಶ ಅಸಿಂಧುಗೊಳಿಸುವುದಿಲ್ಲ. ಈ ರೀತಿ ಅಸಿಂಧುಗೊಳಿಸಿದರೇ ಹಾಡುಹಗಲೇ ಅಥವಾ ಕಣ್ಣೆದುರೇ ಅಕ್ರಮ ಮದ್ಯ ಸಮೇತ ಪ್ರಕರಣದ ಅಪರಾಧಿಗಳನ್ನು ಕೈಚೆಲ್ಲಬೇಕಾಗುತ್ತದೆ ಕಾನೂನನ್ನು ಅಪರಾಧಿಗಳಿಗೆ ಸಹಾಯವಾಗುವ ರೀತಿಯಲ್ಲಿ ಅರ್ಥಮಾಡಿಕೊಂಡಲ್ಲಿ ಇನ್ನೂ ಹೆಚ್ಚಿನ ಅಪರಾಧಗಳು ಆಗುವ ಸಂಭಾವ್ಯತೆಗಳು ಜಾಸ್ತಿ. ಆದುದರಿಂದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54 ರ ಹಿಂದಿನ ಉದ್ದೇಶವನ್ನು ಅರಿತು ವ್ಯಾಖ್ಯಾನಿಸಬೇಕಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಗೌರವಾನ್ವಿತ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ

ನೀಡಿದ ತೀರ್ಪು ಸಂ: ILR: 2004: KAR:536 ರ ಪುಟ ಸಂ:527ರಲ್ಲಿ ವಿವರವಾಗಿ ಪ್ರಸ್ತಾವಿಸಲಾಗಿದೆ. "ಹಾಗೂ ಪ್ರಕರಣದಲ್ಲಿ ಸ್ವತಂತ್ರ ಸಾಕ್ಷಿಗಳ ಹೇಳಿಕೆಗಳು ಸಿಂಧು ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ವಾಹನದಲ್ಲಿ ತನ್ನ ತಿಳುವಳಿಕೆಗೆ ಬಾರದೇ ಮದ್ಯ ಸಾಗಾಟವಾಗಿರುವುದು ಎಂಬ ಅಂಶವನ್ನು ವಾಹನದ ಮಾಲೀಕರು ಸ್ಪಷ್ಟ ಪಡಿಸದೇ ಇರುವುದು ಹಾಗೂ ಪ್ರಕರಣವನ್ನು ಪೋಲೀಸರು ದ್ವೇಷದಿಂದ ಉದ್ದೇಶ ಪೂರ್ವಕವಾಗಿ ದಾಖಲಿಸಿಕೊಂಡಿರುವುದು ಎಂದು ರಕ್ಷಣಾ ಹೇಳಿಕೆಗಳನ್ನು ನೀಡಿರುವರಾದರೂ ಈ ಬಗ್ಗೆ ಪುರಾವೆಗಳನ್ನು ಒದಗಿಸಿ ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಕಾರಣ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ತಮ್ಮ ಪ್ರತಿವಾದವನ್ನು ಮಂಡಿಸಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳ ಮೇಲೆ ಮತ್ತು ರಕ್ಷಣಾ ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:1–10–2007 ರಂದು ಪಲ್ಸರ್ ಮೋಟಾರ್ ಬೈಕ್ ಸಂ:KA-21-J-8123ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿ ಮದ್ಯವನ್ನು ಹೊಂದಿ ಮಾರಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ,ಸುಳ್ಯ ಇವರ ಪ್ರ.ಮಾ.ವ ಸಂ:175/2007 ದಿ:01–10–2007ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿ ಪ್ರಕಾರ ಮದ್ಯ ಎಂದು ದೃಢ ಪಟ್ಟಿರುವುದು ಹಾಗೂ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಮದ್ಯ ಅನಧಿಕೃತವಾಗಿ ವಾಹನದಲ್ಲಿ ಇಟ್ಟುಕೊಂಡು ಮಾರಾಟ ಮಾಡಲಾಗಿಲ್ಲ ಎಂಬುದನ್ನು ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ವಿಚಾರಣೆ ವೇಳೆಯಲ್ಲಿ ಸಾಭೀತುಪಡಿಸಲು ವಿಪಲರಾಗಿ ಕರ್ನಾಟಕ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ಹೇಳುವಂತಹ ರುಜುವಾತುವಿನ ಭಾರವನ್ನು ಸಮಂಜಸವಾಗಿ ನಿಭಾಯಿಸದೇ ಇರುವುದರಿಂದ ಅಭಿಯೋಜನ ಪರ ಮಂಡಿಸಿದ ಸಾಕ್ಷ್ಯಾಧಾರವನ್ನು ಅವಲಂಬಿಸಿ ವಾಹನದ ಮಾಲೀಕರ ವಿರುದ್ಧ ಪ್ರತಿಕೂಲ ಭಾವನೆಯನ್ನು ಹೊಂದಿ ವಾಹನದ ಮಾಲೀಕರೇ ಈ ಕೃತ್ಯವನ್ನು ಎಸಗಿರುತ್ತಾರೆ ಎಂಬ ಬಗ್ಗೆ ನಿರ್ಣಯಕ್ಕೆ ಬರಲು ಸಾಕಷ್ಟು ವಿಷಯ ಸಾಮಾಗ್ರಿಗಳು ಕಂಡು ಬಂದಿರುವುದರಿಂದ, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿರುತ್ತದೆ.

ಇಂತಹ ಅಬಕಾರಿ ಸೊತ್ತುಗಳ ಅಕ್ರಮ ಮಾರಾಟಕ್ಕೆ ವಾಹನವನ್ನು ಕಾನೂನಿನ ಅರಿವು ಇಲ್ಲದೇ ತನ್ನ ತಿಳುವಳಿಕೆಯ ಕೊರತೆಯಿಂದ ಬಳಸಲಾಗಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತು ಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಹೇಳಿಕೆಗಳನ್ನು ನೀಡಿರುವರಾದರೂ ಸೂಕ್ತ ಪುರಾವೆಗಳನ್ನು ಒದಗಿಸಿ ತನ್ನ ರುಜುವಾತು ಭಾರವನ್ನು ಸಮರ್ಪಕವಾಗಿ ನಿರ್ವಹಿಸದೇ ಇರುವುದರಿಂದ ವಾಹನವನ್ನು ತನ್ನ ಅರಿವೆಗೆ ಬಾರದೇ ಇಂತಹ ಅಕ್ರಮ ಮದ್ಯ ಮಾರಾಟಕ್ಕೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ದಿ:01–10–2007ರಂದು ಪೊಲೀಸ್ ಉಪ ನಿರೀಕ್ಷಕರು,ಸುಳ್ಯ ಪೊಲೀಸ್ ಠಾಣೆ,ಸುಳ್ಯ ಇವರು ಪ್ರಕರಣ ಸಂ:175/2007ರಂತೆ ಅಕ್ರಮವಾಗಿ 4.860 ಲೀಟರು ಮದ್ಯವನ್ನು ವಾಹನ ಸಂ: KA-21-J-8123 ಪಲ್ಸರ್ ಮೋಟಾರ್ ಬೈಕ್ ಇದರಲ್ಲಿ ಇಟ್ಟುಕೊಂಡು ಮಾರಾಟ ಮಾಡಿರುವುದು ಸಾಭೀತಾಗಿದ್ದು, ಇದು ಕರ್ನಾಟಕ ಅಬಕಾರಿ 1965ರ 34ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ 43(ಎ)2ರಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ತೀರ್ಮಾನಿಸಲಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ,ಸುಳ್ಯ ಇವರ ತಕ್ಷೀರು ಸಂ:175/2007,ದಿ:01–10–2007ರಲ್ಲಿ ಜಪ್ತುಪಡಿಸಿರುವ ವಾಹನ ಪಲ್ಸರ್ ಮೋಟಾರ್ ಬೈಕ್ ಸಂ:KA-21-J-8123 (ಚಾಸೀಸ್ ಸಂ:MD2DHDHZZNCM56497 ಮತ್ತು ಇಂಜಿನ್ ಸಂ: DHCBNM94232ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:12–12–2007 ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ವಾಹನ ಸಂ:KA-21-J-8123 ಪಲ್ಸರ್ ಮೋಟಾರ್ ಬೈಕನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ಈ ಆದೇಶದ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರು ಈ ಪ್ರಾಧಿಕಾರದ ಪರ ಅವರ ಸ್ವಾಧೀನಕ್ಕೆ ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–03–2011ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I : ಶ್ರೀ.ರವಿಕುಮಾರ್.ಬಿ,ಬಿನ್:ಮೋನಪ್ಪ ಪೂಜಾರಿ , ಮರ್ಕಂಜೆ ಗ್ರಾಮ, ಬಲ್ಲಕಾನ ಮನೆ, ಸುಳ್ಯ ತಾಲೂಕು

ಪ್ರಾ.ಸಾ–2 : ಶ್ರೀ.ಮೋಹನ್ ಹೊಸಳಿಕೆ ಮನೆ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು

ಪ್ರಾ.ಸಾ–3 : ಶ್ರೀ.ಮಂಜುನಾಥ ಹೆಗ್ಡೆ, ಪಿ.ಸಿ ನಂ:398 ಕಾವೂರು ಪೊಲೀಸ್ ಠಾಣೆ

ಪ್ರಾ.ಸಾ–4 : ಶ್ರೀ.ಸಿ.ಸತೀಶ್ ಎನ್.ಪಿ.ಸಿ,ಸುಳ್ಯ ಪೊಲೀಸ್ ಠಾಣೆ

ಪ್ರಾ.ಸಾ–5: ಶ್ರೀಮತಿ.ಗೀತಾ, ಅ.ನಿ,ಮೆ:ಸಿಂಗಲ್ ಮಾಲ್ಟ್ ಸ್ಪಿರಿಟ್ಸ್,ಬೈಕಂಪಾಡಿ ಮಂಗಳೂರು

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

| | | |
|---|---|---|
| ನಿಶಾನೆ ಪಿ–I | : | ಮಹಜರು ಪ್ರತಿ |
| ನಿಶಾನೆ ಪಿ–1ಎ ರಿಂದ ಡಿ ವರೆಗೆ | : | ಪ್ರಾ.ಸಾ ರವರ ಸಹಿ |
| ನಿಶಾನೆ ಪಿ–2 | : | ಮಾದರಿ ಸಹಿ |
| ನಿಶಾನೆ ಪಿ–3 | : | ಪೊಲೀಸರ ವರದಿ |
| ನಿಶಾನೆ ಪಿ–4 | : | ತನಿಖಾ ವರದಿ |
| ನಿಶಾನೆ ಪಿ–4ಎ | : | ಅದರ ಮೇಲಿನ ಸಹಿ |

**ಅನುಬಂಧ–III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–

ಡಿಡಬ್ಲ್ಯೂ–1 : ಶ್ರೀ.ಪಿ.ಡಿ.ಗೋಪಾಲಕೃಷ್ಣ ಗೌಡ ,ಬಿನ್:ಪಿ.ಸಿ ದೇವಯ್ಯ ಗೌಡ,
ಡೋರ್ ನಂ:1–199, ಪಟ್ರಕೋಡಿ ,ಬಲ್ಯಖಾನ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :– ಇರುವುದಿಲ್ಲ–

**ಬಿ.ವಿ ಹೂವಪ್ಪ ಗೌಡ**

ಪಿ.ಆರ್.463

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/ 193/ ಡಿಟಿಸಿಆರ್/2009–10, ದಿನಾಂಕ:31.03.2011**

**ಉಪಸ್ಥಿತರು:** ಬಿ.ವಿ.ಹೂವಪ್ಪ ಗೌಡ,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು
ಕಡಬ ಪೊಲೀಸ್ ಠಾಣೆ
ಕಡಬ,ಪುತ್ತೂರು

**ಆರೋಪಿ:**

1) ಕೇಶವ ಬಿನ್:ದಿ:ಚೋಮ, ಅರಟ್ಟಿಗೆ ಮನೆ,
ಹಳೆನೇರಂಕಿ ಗ್ರಾಮ, ಪುತ್ತೂರು ತಾಲೂಕು

2) ಸೇಸಪ್ಪ ಪೂಜಾರಿ,ಅಲಿಯಾಸ್ ಪ್ರಮೋದ್

**ವಾಹನದ ಮಾಲೀಕರು**

ಶ್ರೀ. ಅಬ್ದುಲ್ ಸತ್ತಾರ್, ಬಿನ್: ಇಬ್ರಾಹಿಂ, ಕೆ.ಸಿ. ಫಾರ್ಮ್ಸ್, ಕೊಯಿಲ
ಗ್ರಾಮ, ಪುತ್ತೂರು ತಾಲೂಕು

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು,ಕಡಬ ಪೊಲೀಸ್ ಠಾಣೆ ,ಪುತ್ತೂರು ಇವರು ದಿನಾಂಕ: 27–3–2010 ರಂದು ಪುತ್ತೂರು ತಾಲೂಕಿನ ಹಳೆನೇರಂಕಿ ಗ್ರಾಮದ ಅರಟ್ಟಿಗೆ ಎಂಬಲ್ಲಿ ಸೇಸಪ್ಪ ಪೂಜಾರಿ ಮತ್ತು ಕೇಶವ ಪೂಜಾರಿ ಎಂಬವರು ಆಟೋರಿಕ್ಷಾದಲ್ಲಿ ಅಕ್ರಮವಾಗಿ ಮದ್ಯದ ಬಾಟಲಿಗಳನ್ನು ಇಟ್ಟುಕೊಂಡು ಮಾರಾಟ ಮಾಡುತ್ತಿದ್ದಾರೆ ಎಂದು ತಮ್ಮ ಸಿಬ್ಬಂದಿಯೋರ್ವರು ನೀಡಿದ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂಧಿಯವರು ಮತ್ತು ಪಂಚಸಾಕ್ಷಿಯರೊಂದಿಗೆ ಸದ್ರಿ ಪರಿಸರಕ್ಕೆ ಬಂದು ಅಟೋ ರಿಕ್ಷಾವನ್ನು ಪರಿಶೀಲಿಸಲಾಗಿ ರಿಕ್ಷಾದಲ್ಲಿ ಕುಳಿತಿದ್ದ ಓರ್ವ ವ್ಯಕ್ತಿ ತಲೆಮರೆಸಿ ಕೊಂಡಿದ್ದು, ಇನ್ನೋರ್ವ ವ್ಯಕ್ತಿಯು ತನ್ನ ಪಕ್ಕದ್ದಲ್ಲಿ ಪ್ಲಾಸ್ಟಿಕ್ ಗೋಣಿ ಚೀಲವೊಂದನ್ನು ಇಟ್ಟುಕೊಂಡಿರುವುದು ಕಂಡು ಬಂದು, ಸದ್ರಿ ಗೋಣಿ ಚೀಲವನ್ನು ಪರಿಶೀಲಿಸಲಾಗಿ ಅದರಲ್ಲಿ 180 ಎಂಎಲ್‌ನ 27 ಮದ್ಯ ತುಂಬಿದ ಬಾಟಲಿಗಳು ಇರುವುದನ್ನು ಪತ್ತೆಹಚ್ಚಿ , ಸದ್ರಿ ಮದ್ಯವನ್ನು ಹೊಂದಿರುವ ಯಾವುದೇ ಪರವಾನಿಗೆ ಇಲ್ಲದಿರುವುದನ್ನು ಖಚಿತ ಪಡಿಸಿಕೊಂಡು, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 15ರ ಪ್ರಕಾರ ಅಪರಾಧ ಹಾಗೂ 32, 34 ಮತ್ತು 43ಎ ರಂತೆ ಶಿಕ್ಷಾರ್ಹವಾಗಿರುವುದರಿಂದ, ಪತ್ತೆಯಾದ ಮದ್ಯದಿಂದ 2 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ವಾಹನ

ಸಮೇತ ಮದ್ಯವನ್ನು ಜಪ್ತು ಪಡಿಸಿಕೊಂಡು ಪಂಚರ ಸಮಕ್ಷಮ ಮಹಜರು ಕ್ರಮ ಜರುಗಿಸಿ ಅರೋಪಿಗಳಾದ ಕೇಶವ ಬಿನ್:ದಿ:ಚೋಮ,ಅರಟ್ಟಿಗೆ ಮನೆ, ಹಳೆನೇರಂಕಿ ಗ್ರಾಮ, ಪುತ್ತೂರು ತಾಲೂಕು ಮತ್ತು ಪ್ರಕರಣ ಸಂದರ್ಭದಲ್ಲಿ ತಲೆ ಮರೆಸಿ ಕೊಂಡಿರುವ ಸೇಸಪ್ಪ ಪೂಜಾರಿ, ಅಲಿಯಾಸ್ ಪ್ರಮೋದ್ ಇವರುಗಳ ವಿರುದ್ಧ ಕಡಬ ಪೊಲೀಸ್ ಠಾಣಾ ಕ್ರೈಂ ಸಂ:40/2010 ದಿ:27–3–2010ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ ಹಾಗೂ ದಾಖಲಾತಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ವಾಹನ ಹಾಗೂ ಸೊತ್ತುಗಳನ್ನು ಇಲಾಖಾ ವಶಕ್ಕೆ ಹಸ್ತಾಂತರಿಸಲು ದಿನಾಂಕ:29–3–2010 ರಂದು ಈ ಪ್ರಾಧಿಕಾರದ ಅನುಮತಿ ಕೋರಿದ ಮೇರೆಗೆ ದಿ:24–4–2010 ರ ಪ್ರಾಧಿಕಾರದ ಆದೇಶದಲ್ಲಿ ಅನುಮತಿ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ಪತ್ರ ಸಂಖ್ಯೆ: ಅನಿ/ಉ.ವ/ ಅಸಿಆರ್/3/10–11 ದಿನಾಂಕ:14.05.2010ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಈ ಕೆಳಗಿನ ಸೊತ್ತುಗಳನ್ನು ಪೊಲೀಸ್ ಅಧಿಕಾರಿಗಳಿಂದ ದಿನಾಂಕ:14.05.2010ರಂದು ಸ್ವೀಕರಿಸಿಕೊಂಡಿರುವ ಬಗ್ಗೆ ವರದಿಸಿರುತ್ತಾರೆ.

1) ಬಜಾಜ್ ಆಟೋ ರಿಕ್ಷಾ ಸಂ:KA-21-4246

2) 180 ಎಂ ಎಲ್ ನ ಸೂಪರ್ ಜಾಕ್ ಕ್ಲಾಸಿಕ್ ವಿಸ್ಕಿಯ 27 ಬಾಟಲಿಗಳಲ್ಲಿ 4.860 ಲೀ ಮದ್ಯ

(180 ಎಂಎಲ್‌ನ 2 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

3) 180 ಎಂಎಲ್‌ನ ಸೂಪರ್ ಜಾಕ್ ಕ್ಲಾಸಿಕ್ ವಿಸ್ಕಿಯ ಖಾಲಿ ಬಾಟಲಿಗಳು–3

ಅಬಕಾರಿ ಪುತ್ತೂರು ವಲಯ ಇವರ ತನಿಖಾ ವರದಿ ಸಂಖ್ಯೆ: ಅನಿ/ಪು.ವ/ ಆರ್‌ಸಿಆರ್/03/2010–11 ದಿ: 17–7–2010ರ ವರದಿಯೊಂದಿಗೆ ಲಗತ್ತಿಸಲಾದ ಸಹಾಯಕ ಪೊಲೀಸ್ ಅಧೀಕ್ಷಕರು,ಪುತ್ತೂರು ಉಪ ವಿಭಾಗ ಇವರು ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು,ಮಂಗಳೂರು ವಲಯ ಇವರಿಂದ ಪಡೆದು ಸಲ್ಲಿಸಿದ್ದ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಇಎಕ್ಸ್ ನಂ:ಇ–95–2 ದಿ:29–4–2010ರಲ್ಲಿ ಮದ್ಯದಲ್ಲಿ ಮದ್ಯಸಾರದ ಪ್ರಮಾಣ 44% ಇರುವುದಾಗಿ ದೃಡೀಕರಿಸಿರುತ್ತಾರೆ. ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ವರದಿ ಮತ್ತು ಮೌಲ್ಯ ಮಾಪನ ವರದಿಯನ್ನು ತನಿಖಾದಿಕಾರಿಗಳು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಪುತ್ತೂರು, ದ.ಕ ಜಿಲ್ಲೆ ಇವರಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಹಾಗೂ ಈ ಪ್ರಕರಣದಲ್ಲಿ ಜಪ್ತುಪಡಿಸಿ ಕೊಳ್ಳಲಾದ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆಯಲಾದ ಬಿ ರಿಜಿಸ್ಟ್ರಾರ್ ವರದಿಯಲ್ಲಿ ಅಬ್ದುಲ್ ಸತ್ತಾರ್, ಬಿನ್:ಇಬ್ರಾಹಿಂ,ಕೆ.ಸಿ.ಫಾರ್ಮ್ಸ್ ಕೊಯಿಲ ಗ್ರಾಮ, ಪುತ್ತೂರು ತಾಲೂಕು ಇವರು ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ದೃಡೀಕೃತವಾಗಿರುವುದರಿಂದ, ಸದ್ರಿ ವಾಹನದ ನೊಂದಣಿ ಮಾಲೀಕರಿಗೆ, ಹಣಕಾಸು ಸಂಸ್ಥೆ ಹಾಗೂ ಪ್ರಕರಣದ ಅರೋಪಿತ ವ್ಯಕ್ತಿಗಳಿಗೆ ಈ ಪ್ರಾಧಿಕಾರದಿಂದ ದಿ:30–8–2010ರಂದು ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಬಾರದು ? ಎಂಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸು ನೊಂದಾಯಿತ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ಅರೋಪಿತ ವ್ಯಕ್ತಿಗೆ ದಿ:8–9–2010ರಂದು ಹಾಗೂ ವಾಹನದ ಮಾಲೀಕರಿಗೆ ದಿ:15–9–2010 ರಂದು ಜಾರಿಯಾಗಿದ್ದು , ಹಣಕಾಸು ಸಂಸ್ಥೆಗೆ ಜಾರಿಯಾಗದೇ ಅಂಚೆ ಷರಾದೊಂದಿಗೆ ವಾಪಾಸ್ಸು ಬಂದಿರುತ್ತದೆ. ವಾಹನದ ಮಾಲೀಕರಿಗೆ ಹಾಗೂ ಆರೋಪಿತ ವ್ಯಕ್ತಿಗೆ ನೋಟಿಸು ಜಾರಿಯಾಗಿದ್ದರೂ ಕೂಡಾ ಯಾರಿಂದಲೂ ಸದ್ರಿ ಕಾರಣ ಕೇಳಿ ನೋಟಿಸಿಗೆ ಸಮಂಜಾಯಿಸಿ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ತನಿಖಾ ವರದಿಯನ್ನು ಆಧರಿಸಿ, ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/193/ಡಿಟಿಸಿಆರ್/ 2009–10, ದಿನಾಂಕ:30.08.2010ರ ಆದೇಶದಲ್ಲಿ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳ ಪೈಕಿ ವಾಹನವನ್ನು ಹೊರತುಪಡಿಸಿ ಉಳಿದ ಮದ್ಯ (ಮಾದರಿಗಳನ್ನು ಹೊರತುಪಡಿಸಿ)ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪ್ರಸ್ತುತ ಜಾರಿಯಲ್ಲಿರುವ ಸರ್ಕಾರದ ಆದೇಶದಂತೆ ಮದ್ಯವನ್ನು ನಾಶಪಡಿಸಲಾಗಿರುತ್ತದೆ.

ವಾಹನವನ್ನು ದಿ:27.03.2010ರಂದು ವಶಪಡಿಸಿಕೊಂಡು ಈಗಾಗಲೇ 1 ವರ್ಷ ಕಳೆದರೂ, ಪ್ರಕರಣದಲ್ಲಿ ದಸ್ತಗಿರಿಯಾದ ಅರೋಪಿಗಳಾಗಲೀ, ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ವಾಹನದ ಮಾಲೀಕತ್ವ ನಿರೂಪಿಸಿ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಜಪ್ತು ಸಂದರ್ಭದಲ್ಲಿ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರವು ಮನಗಂಡು ಮುಟ್ಟುಗೋಲು ನಡವಳಿಯನ್ನು ಪ್ರಾರಂಭಿಸಲಾಗಿರುತ್ತದೆ.

ಮುಟ್ಟುಗೋಲು ನಡವಳಿ ಪ್ರಯುಕ್ತ ವಿಚಾರಣೆಯನ್ನು ಆರಂಭಿಸಿ, ಈ ಕೆಳಗಿನಂತೆ ವಿವಾದಾಂಶಗಳ ಉತ್ತರ ಪಡೆಯಲಾಗಿರುತ್ತದೆ.

1) ಮೊದಲನೇ ವಿವಾದಾಂಶ: ದಿ:27.03.2010 ರಂದು ವಾಹನ ಸಂಖ್ಯೆ: KA-21-4246 ಬಜಾಜ್ ಆಟೋ ರಿಕ್ಷಾದಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತು ಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ:1**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾದಿಕಾರಿಗಳಾದ ಶ್ರೀ.ಶಿವಪ್ರಸಾದ್, ಅ.ನಿ ಪುತ್ತೂರು ವಲಯ ಇವರು ಪ್ರಾದಿಕಾರದ ಮುಂದೆ ಹಾಜರಾಗಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನ ಸಮೇತ ಎಲ್ಲಾ ಸೊತ್ತು ಮತ್ತು ದಾಖಲೆಗಳನ್ನು ಸ್ವೀಕರಿಸಿಕೊಂಡು , ವಾಹನದ ಬಿ ರಿಜಿಸ್ಟಾರ್ ಎಕ್ಸ್ ಟ್ರಾಕ್ಟ್ ವರದಿ ಮತ್ತು ಮೌಲ್ಯ ಮಾಪನ ವರದಿಯನ್ನು ಪ್ರಾದೇಶಿಕ ಸಾರಿಗೆ ಅದಿಕಾರಿಗಳು, ಪುತ್ತೂರು ಇವರಿಂದ ಪಡೆದುಕೊಂಡ ಬಗ್ಗೆ ಹಾಗೂ ಪ್ರಕರಣದ ಸೊತ್ತುಗಳನ್ನು ಅಬಕಾರಿ ಕಾಯಿದೆ ಕಲಂ 43 ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಪ್ರಾದಿಕಾರಕ್ಕೆ ವರದಿ ಸಲ್ಲಿಸಿರುವ ಬಗ್ಗೆ ಸಾಕ್ಷ್ಯ ನೀಡಿ ಮುಖ್ಯ ದಾಖಲೆಗಳನ್ನು ಗುರುತಿಸಿರುತ್ತಾರೆ.

**ಪಾಟೀ ಸವಾಲು:** ಜಪ್ತು ಪಡಿಸಿಕೊಂಡ ವಾಹನದ ಮಾಲೀಕರಾಗಲೀ,ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ:2**

ಪ್ರಾಸಿಕ್ಯೂಶನ್ ಪರ ಪ್ರಕರಣ ಪತ್ತೆಹಚ್ಚಿದ ಶ್ರೀ.ವಿನಾಯಕ ,ಪೊ.ಉ.ನಿ ರವರು ಪ್ರಾದಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನೀಡುತ್ತಾ ಠಾಣೆಯ ಸಿಬ್ಬಂಧಿಯವರು ರಾತ್ರಿ ಬೀಟ್ ಕರ್ತವ್ಯದಲ್ಲಿರುವ ಸಮಯ ನೀಡಿದ ಮಾಹಿತಿ ಮೇರೆಗೆ ತಾನು ಸಿಬ್ಬಂಧಿಯವರೊಂದಿಗೆ ದಿ:21–3–2010 ರಂದು ವಾಹನ ಅಟೋ ರಿಕ್ಷಾ ಸಂ: ಕೆಎ –21–4246 ಇದರಲ್ಲಿ ಅಕ್ರಮವಾಗಿ ಯಾವುದೇ ಪರವಾನಿಗೆ ಇಲ್ಲದೇ 180 ಎಂ ಎಲ್‌ನ 27 ಬಾಟಲಿಗಳಲ್ಲಿ ಒಟ್ಟು 4.860 ಲೀಟರು ಮದ್ಯವನ್ನು ಮಾರಾಟ ಮಾಡಲು ಹೊಂದಿ ಕೊಂಡಿರುವುದನ್ನು ಪತ್ತೆಹಚ್ಚಿ, ಜಪ್ತುಪಡಿಸಿಕೊಳ್ಳಲಾದ ಮದ್ಯದ ಮಾದರಿಗಳನ್ನು ತೆಗೆದು ಪಂಚ ಸಾಕ್ಷಿದಾರರ ಸಮಕ್ಷಮ ಮಹಜರು ಜರುಗಿಸಿ ಸೊತ್ತುಗಳನ್ನು ವಶಕ್ಕೆ ತೆಗೆದುಕೊಂಡು, ಅನಂತರದಲ್ಲಿ ಆರೋಪಿಗಳಾದ ಸೇಸಪ್ಪ ಪೂಜಾರಿ ಅಲಿಯಾಸ್ ಪ್ರಮೋದ್ ಮತ್ತು ಕೇಶವ ಇವರುಗಳ ವಿರುದ್ಧ ಕ್ರೈಂ ಸಂ:40/2010 ದಿ:27–3–2010ರಂತೆ ಮೊಕದ್ದೆಮೆ ದಾಖಲಿಸಿಕೊಂಡು ಪ್ರ.ವ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತು ಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ಕಾಯಿದೆಯನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಪ್ರಕರಣದ ಸೊತ್ತು ಮತ್ತು ದಾಖಲೆಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಿ ರುವುದಾಗಿ ಸಾಕ್ಷ್ಯ ನೀಡುತ್ತಾ ಪ್ರಕರಣದ ಮುಖ್ಯ ದಾಖಲೆಗಳನ್ನು ಗುರುತಿಸಿರುತ್ತಾರೆ.

ವಿಚಾರಣಾ ಸಂದರ್ಭದಲ್ಲಿ ವಾಹನದ ಮಾಲೀಕರಾಗಲಿ, ಅವರ ಪರ ಪ್ರತಿನಿಧಿಗಳಾಗಲೀ ಹಾಜರಿರದ ಕಾರಣ ರಕ್ಷಣಾ ಪರ ಸಾಕ್ಷಿಗಳು ಇಲ್ಲವೆಂದು ಪರಿಗಣಿಸಿ, ಅಭಿಯೋಗದ ಪರ ಸಾಕ್ಷಿಗಳ ವಿಚಾರಣೆ ಮುಕ್ತಾಯಗೊಳಿಸಿ, ಸರ್ಕಾರಿ ಅಭಿಯೋಜಕರ ವಾದ ಮಂಡನೆಯನ್ನು ಆಲಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:27.03.2010ರಂದು ಜಪ್ತು ಪಡಿಸಿಕೊಂಡಿರುವ ಬಜಾಜ್ ಆಟೋ ರಿಕ್ಷಾ ಸಂ: KA-21-4246 ರಲ್ಲಿ ಅಕ್ರಮವಾಗಿ 4.860 ಲೀಟರ್ ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡಿರುವುದು ವಾಹನದ ಮಾಲೀಕರು ಅಥವಾ ತತ್ಸಂಬಂಧ ವ್ಯಕ್ತಿಗಳು ತಮ್ಮ ತಿಳುವಳಿಕೆಯಿಂದಲೇ ಈ ಅಪರಾಧವೆಸಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ವಾಹನಕ್ಕೆ ಸಂಬಂಧಿಸಿದಂತೆ ತನಿಖಾದಿಕಾರಿಗಳು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು ಸಲ್ಲಿಸಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ದೃಡೀಕೃತವಾಗಿರುವ ಮಾಲೀಕರಿಗೆ ಹಾಗೂ ಆರೋಪಿತ ವ್ಯಕ್ತಿಗಳಿಗೆ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸು ಜಾರಿಯಾಗಿದ್ದರೂ ಸದ್ರಿಯವರಿಂದ ಯಾವುದೇ ಸಮಂಜಾಯಿಷಿ ಉತ್ತರ ಹಾಗೂ ವಾಹನದ ಬಿಡುಗಡೆಗಾಗಿ ಅರ್ಜಿ ಈ ಪ್ರಾದಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕಾರಣ ಜಪ್ತುಪಡಿಸಿದ ಸೊತ್ತುಗಳಿಗೆ ಯಾರೊಬ್ಬರ ಬೇಡಿಕೆ ಇಲ್ಲವೆಂದು ಪರಿಗಣಿಸಲಾಗಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾದಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನು ಬದ್ದವಾಗಿದೆಯೆಂದು ಸಾಕ್ಷ್ಯಾಧಾರ ದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಕಡಬ ಪೊಲೀಸ್ ಠಾಣೆ, ಕಡಬ ಇವರ ಠಾಣಾ ತಕ್ಷೀರು ಸಂಖ್ಯೆ:40/2010 ದಿ:27.03.2010ರಂದು ದಾಖಲಿಸಿದ ಪ್ರಕರಣದಲ್ಲಿ ಆರೋಪಿಯು 4.860 ಲೀಟರ್ ಅಕ್ರಮ ಮದ್ಯವನ್ನು ಸಾಗಾಣಿಕೆ ಮಾಡುವುದನ್ನು ಪತ್ತೆಹಚ್ಚಿ, ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಅಟೋ ರಿಕ್ಷಾ ಸಂ: KA-21-4246ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ ಕಳೆದರೂ ಈ ಪ್ರಾದಿಕಾರದ ಮುಂದೆ ಅಥವಾ ತಕ್ಷೀರು ದಾಖಲಿಸಿದ ಪೊಲೀಸ್ ಠಾಣೆಯಲ್ಲಿ ಅಥವಾ ಕಾರ್ಯವ್ಯಾಪ್ತಿಯ ಅಬಕಾರಿ ಇಲಾಖಾ ಕಛೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಅಥವಾ ಅರೋಪಿಗಳು ವಾಹನದ ಮಾಲಿಕತ್ವ

ನಿರೂಪಿಸಿ ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ತಕ್ಷೀರಿನ ತನಿಖಾದಿಕಾರಿಗಳು ಪ್ರಾದೇಶಿಕ ಅಧಿಕಾರಿಗಳಿಂದ ಪಡೆದು ಒಪ್ಪಿಸಿದ್ದ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಲಾಗಿರುವ ವಾಹನದ ಮಾಲೀಕರಿಗೆ/ ಆರೋಪಿತ ವ್ಯಕ್ತಿಗಳಿಗೆ ಕರ್ನಾಟಕ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ನೊಂದಾಯಿತ ಅಂಚೆಯ ಮೂಲಕ ಕಾರಣ ಕೇಳಿ ನೋಟಿಸನ್ನು ನೀಡಲಾಗಿ,ಸದ್ರಿ ನೋಟಿಸುಗಳು ಜ್ಯಾರಿಯಾಗಿದ್ದರೂ ಕೂಡಾ ಯಾರಿಂದಲೂ ಯಾವುದೇ ಸಮಂಜಾಯಿಷಿ ಉತ್ತರ ಈ ಪ್ರಾದಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕಾರಣ ಅಕ್ರಮ ಮದ್ಯ ಸಾಗಾಟಕ್ಕೆ ವಾಹನವನ್ನು ಮಾಲೀಕರು ತಮ್ಮ ತಿಳುವಳಿಯಿಂದಲೇ ಬಳಸಿಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ವಾಹನ ಬಜಾಜ್ ಆಟೋ ರಿಕ್ಷಾ ಸಂ:KA-21-4246 ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಸಿ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/193/ಡಿಟಿಸಿಆರ್/2009–10, ದಿನಾಂಕ:31.03.2011**

ಬಿ.ವಿ.ಹೂವಪ್ಪ ಗೌಡ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 43(ಬಿ) ಅಡಿ ಕ್ರಮ ಜರುಗಿಸಿ, ಪೊಲೀಸ್ ಉಪ ನಿರೀಕ್ಷಕರು, ಕಡಬ ಪೊಲೀಸ್ ಠಾಣೆ, ಕಡಬ ಇವರ ಠಾಣಾ ಕ್ರೈಂ, ಸಂ:40/2010 ದಿ:27.03.2010ರಲ್ಲಿ ಜಪ್ತು ಪಡಿಸಿಕೊಂಡಿರುವ ಬಜಾಜ್ ಆಟೋ ರಿಕ್ಷಾ ಸಂ: KA-21-4246 (ಚಾಸೀಸ್ ನಂ: 24FBFM69917 ಮತ್ತು ಇಂಜಿನ್ ಸಂ:AFM BFM 10298 ) ನ್ನು ನಿಯಮ 43(ಸಿ)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:31.03.2011ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1:– ಶ್ರೀ.ಶಿವಪ್ರಸಾದ್, ಅ.ನಿ,ಪುತ್ತೂರು ವಲಯ

ಪ್ರಾ.ಸಾ–2:– ಶ್ರೀ.ವಿನಾಯಕ , ಪೊ.ಉ.ನಿ , ಕದ್ರಿ ಪೊಲೀಸ್ ಠಾಣೆ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು**

ನಿಶಾನೆ ಪಿ–1 : ಪ್ರಾದಿಕಾರದ ದಿ:24–4–2010ರ ವರದಿ ಪ್ರತಿ
ನಿಶಾನೆ ಪಿ–2 : ತನಿಖಾ ವರದಿ ದಿ:14–5–2010
ನಿಶಾನೆ ಪಿ–2ಎ : ಸಾಕ್ಷಿ ಸಹಿ
ನಿಶಾನೆ ಪಿ–3 : ತನಿಖಾ ವರದಿ ದಿ:17–7–2010
ನಿಶಾನೆ ಪಿ–3ಎ : ಸಾಕ್ಷಿ ಸಹಿ
ನಿಶಾನೆ ಪಿ–4 : ಬಿ ವರದಿ
ನಿಶಾನೆ ಪಿ–4 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–5 : ರಾಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ–6 : ಮಹಜರು ಪ್ರತಿ
ನಿಶಾನೆ ಪಿ–6 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–7 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–7 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–8 : ಅಧಿಕೃತ ಅಧಿಕಾರಿಗಳಿಗೆ ಬರೆದ ಪತ್ರ
ನಿಶಾನೆ ಪಿ–8 ಎ : ಅದರ ಮೇಲಿನ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ಬಿ.ವಿ ಹೂವಪ್ಪ ಗೌಡ**
ಪಿ.ಆರ್.464 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/311/ಡಿಟಿಸಿಆರ್/2007–08, ದಿನಾಂಕ: 24–03–2011**

**ಉಪಸ್ಥಿತರು:** ಬಿ.ವಿ ಹೂವಪ್ಪ ಗೌಡ,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಫಿರ್ಯಾದುದಾರರು:–**

ಪೊಲೀಸ್ ಉಪ ನಿರೀಕ್ಷಕರು
ಸುಳ್ಯ ಪೊಲೀಸ್ ಠಾಣೆ,
ಸುಳ್ಯ

**ಆರೋಪಿಗಳು**

1) ತಿಮ್ಮಪ್ಪ ಗೌಡ, ಬಿನ್: ಕಂದಪ್ಪ ಗೌಡ,ಕೆನಾಜೆ ಮನೆ, ಮಂಡೆಕೋಲು ಗ್ರಾಮ,ಸುಳ್ಯ ತಾಲೂಕು

2) ನಾರಾಯಣ ಕೆ., ಬಿನ್:ದಾಮು ಪೂಜಾರಿ,ನಾವೂರು ಮನೆ, ಸುಳ್ಯ ಕಸಬಾ ಗ್ರಾಮ,ವೈಭವ್ ಬಾರ್ & ರೆಸ್ಟೋರೆಂಟ್ ,ಶ್ರೀರಾಮ ಪೇಟೆ,ಸುಳ್ಯ

**ವಾಹನದ ಮಾಲೀಕರು**

ಶ್ರೀ.ಎಂ.ಹೆಚ್.ಹಮೀದ್,
ಬಿನ್: ಹಸ್ಸೈನಾರ್ ಹಾಜಿ, ಮೈನಾಡಿ ಹೌಸ್
ಮಂಡೆಕೋಲು ,ಸುಳ್ಯ ತಾಲೂಕು

**ಪ್ರಕರಣದ ಮುಖ್ಯಾಂಶಗಳು:–**

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯರವರು ದಿ:3–1–2008 ರಂದು ರಾತ್ರಿ 10–30 ಗಂಟೆ ಸಮಯಕ್ಕೆ ಖಚಿತ ಮಾಹಿತಿಯ ಮೇರೆಗೆ ಸುಳ್ಯ ತಾಲೂಕು, ಅಜ್ಜಾವರ ಗ್ರಾಮದ ಕರಿಯಮೂಲೆ ಎಂಬಲ್ಲಿ ಅಕ್ರಮವಾಗಿ 138.240 ಲೀ ಮದ್ಯವನ್ನು ಜೀಪು ಸಂ: ಕೆಎ–21–ಎಂ–7307 ರಲ್ಲಿ ಅಕ್ರಮವಾಗಿ ಸಾಗಾಟ ಮಾಡುತ್ತಿದ್ದುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 32,34 38(ಎ) ಮತ್ತು 43(ಎ) ರೀತ್ಯಾ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ವಾಹನ ಹಾಗೂ ಮದ್ಯವನ್ನು ಜಪ್ತು ಪಡಿಸಿಕೊಂಡು, ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಪ್ರತ್ಯೇಕಿಸಿ, ಮಹಜರು ಕ್ರಮ ಜರುಗಿಸಿ ಆರೋಪಿಗಳಾದ ತಿಮ್ಮಪ್ಪ ಗೌಡ, ಬಿನ್:ಕೂಸಪ್ಪ ಗೌಡ, ಕೇನಾಜೆ ಮನೆ, ಮಂಡೆಕೋಲು ಗ್ರಾಮ,ಸುಳ್ಯ ತಾಲೂಕು ಮತ್ತು ನಾರಾಯಣ ಕೆ.ಬಿನ್:ದೂಮಪ್ಪ ಪೂಜಾರಿ ನಾವೂರು ಮನೆ, ಸುಳ್ಯ ಕಸಬ ಗ್ರಾಮ, ವೈಭವ ಬಾರ್ ಅಂಡ್ ರೆಸ್ಟೋರೆಂಟ್, ಶ್ರೀರಾಮ ಪೇಟೆ,ಸುಳ್ಯ ಇವರುಗಳ ವಿರುದ್ಧ ಕ್ರೈಂ ಸಂ:4/2008, ದಿ:3–1–2008 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರ.ಮಾ.ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ದಾಖಲೆಗಳೊಂದಿಗೆ ಅಬಕಾರಿ ಉಪ ನಿರೀಕ್ಷಕರು,ಸುಳ್ಯ ಜಾರಿ ಮತ್ತು ತನಿಖೆ ಇವರಿಗೆ ಪ್ರಾಧಿಕಾರದ ದಿ:4–2–2008ರ ಅನುಮತಿಯಂತೆ ದಿ:8–2–2008ರಂದು ಮುಂದಿನ ತನಿಖೆಗೆ ಹಸ್ತಾಂತರಿಸಿರುತ್ತಾರೆ .

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:–**

1) ಜೀಪು ನೋಂದಣಿ ಸಂ: KA-21-M-7307

2) 15 ರಟ್ಟಿನ ಪೆಟ್ಟಿಗೆಗಳಲ್ಲಿ 180 ಎಂ ಎಲ್ ನ ತಲಾ 48ರಂತೆ ಸೂಪರ್ ಜಾಕ್ ಕ್ಲಾಸಿಕ್ ವಿಸ್ಕಿ ಒಟ್ಟು 720 ಬಾಟಲಿಗಳಲ್ಲಿ –129.600 ಲೀ ಮದ್ಯ

3) ಒಂದು ಪೆಟ್ಟಿಗೆಯಲ್ಲಿ ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಂ ಎಂಬ ಹೆಸರಿನ ತಲಾ 180 ಎಂಎಲ್‌ನ 48 ಬಾಟಲಿಗಳಲ್ಲಿ – 8.640 ಲೀ ಮದ್ಯ

(ಮೇಲಿನ ಕ್ರ.ಸಂ:2 ಮತ್ತು 3ರ ಮದ್ಯದಿಂದ 180 ಎಂಎಲ್‌ನ ಒಂದೊಂದು ಬಾಟಲಿಯಂತೆ ಒಟ್ಟು 2 ಬಾಟಲಿಗಳನ್ನು ಮಾದರಿಗಾಗಿ ತೆಗೆಯಲಾಗಿದೆ )

ಜಪ್ತಾದ ವಾಹನ ಜೀಪು ನೋಂದಣಿ ಸಂ:KA-21-M-7307 ಇದರ ಮಾಲೀಕರೆಂದು ಹೇಳಿಕೊಂಡ ಶ್ರೀ.ಎಂ.ಹೆಚ್.ಹಮೀದ್, ಬಿನ್: ಹಸ್ಸೈನಾರ್ ಹಾಜಿ, ಮೈನಾಡಿ ಹೌಸ್ ಮಂಡೆಕೋಲು, ಸುಳ್ಯ ತಾಲೂಕು ಇವರು ತಮ್ಮ ವಕೀಲರ ಮೂಲಕ ದಿ:23–1–2008ರಂದು ಅರ್ಜಿ ಸಲ್ಲಿಸಿ, ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರ ಅರ್ಜಿಯ ವಿಚಾರಣೆ ಕೈಗೊಂಡು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ ಜಿಲ್ಲೆ, ಮಂಗಳೂರು ಇವರ ಪ್ರಾಧಿಕಾರದಿಂದ ದಿನಾಂಕ: 26–3–2008ರಂದು ಹೊರಡಿಸಿದ ಮಧ್ಯಂತರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ಪುರಸ್ಕರಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನಕ್ಕೆ ನಿಗಧಿಪಡಿಸಿರುವ ಮೊತ್ತಕ್ಕೆ ಸಮಾನವಾದ ರೂ.42,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯನ್ನು ಭದ್ರತೆಯಾಗಿ ಒದಗಿಸುವ ಹಾಗೂ ಇತರೆ ಷರತ್ತುಗಳ ಮೇಲೆ ವಾಹನವನ್ನು ಮಾಲೀಕರ ಸುಪರ್ಧಿಗೆ ಬಿಡುಗಡೆಗೊಳಿಸಲು ಆದೇಶಿಸಲಾಗಿದೆ. ಸದ್ರಿ ಅದೇಶದಂತೆ ವಾಹನದ ಮಾಲೀಕರು ರೂ.42,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸುಳ್ಯ ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿರುವ ಮೇರೆಗೆ ವಾಹನವನ್ನು ವಾಹನದ ಮಾಲೀಕರಿಗೆ ಬಿಡುಗಡೆಗೊಳಿಸಲಾಗಿರುತ್ತದೆ.ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:1–3–2010 ರವರೆಗೆ ಊರ್ಜಿತದಲ್ಲಿದ್ದು, ತದನಂತರದಲ್ಲಿ ಬ್ಯಾಂಕ್ ಗ್ಯಾರೆಂಟಿಯನ್ನು ಇನ್‌ವೋಕ್ ಮಾಡಿಕೊಂಡು ಅಡಕವಾಗಿರುವ ಮೊತ್ತವನ್ನು ಸರ್ಕಾರದ ರೆವೆನ್ಯೂ ಡೆಪಾಸಿಟ್ ಖಾತೆಯಲ್ಲಿ ಚಲನ್ ಸಂ:108 ದಿ:12–3–2010ರಂದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ , ಮಂಗಳೂರು ಶಾಖೆಯಲ್ಲಿ ಜಮೆಮಾಡಲಾಗಿರುತ್ತದೆ.

ತನಿಖಾದಿಕಾರಿಗಳು ಪ್ರಕರಣದಲ್ಲಿ ತನಿಖೆ ಕೈಗೊಂಡು ಜಪ್ತಾದ ವಾಹನ ಜೀಪು ನೋಂದಣಿ ಸಂ: KA-21-M-7307 ಇದರ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಸ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ

ಶ್ರೀ.ಎಂ.ಹೆಚ್.ಹಮೀದ್, ಬಿನ್:ಹಸೈನಾರ್ ಹಾಜಿ,ಮೈನಾಡಿ ಹೌಸ್, ಮಂಡೆಕೋಲು, ಸುಳ್ಯ ತಾಲೂಕು ಇವರು ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ಹಾಗೂ ಮೆ:ಮಹಾರಾಷ್ಟ್ರ ಎಪೆಕ್ಸ್ ಕಾರ್ಪೊರೇಶನ್ ಲಿಮಿಟೆಡ್, ಮಣಿಪಾಲ ಇವರು ವಾಹನದ ಹೆಚ್.ಪಿ.ಎ ದಾರರಾಗಿರುವುದಾಗಿ ದೃಡಪಟ್ಟಿರುವ ಮೇರೆಗೆ ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ, ವಾಹನದ ಮಾಲೀಕರಿಗೆ ಹಾಗೂ ಹೆಚ್.ಪಿ.ಎ ದಾರರಿಗೆ ಈ ಪ್ರಾಧಿಕಾರದಿಂದ ದಿ:21–6–2008 ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ರ ಪ್ರಕಾರ ಕಾರಣ ಕೇಳಿ ನೋಟಿಸು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರಿಗೆ ದಿನಾಂಕ:2–7–2008ರಂದು ಹಾಗೂ ಆರೋಪಿತ ವ್ಯಕ್ತಿಗಳಿಗೆ ದಿ:28–6–2008ರಂದು ಜ್ಯಾರಿಯಾಗಿದ್ದು, ಅರೋಪಿತ ವ್ಯಕ್ತಿಗಳಲ್ಲಿ ಒರ್ವರಾದ ಶ್ರೀ.ತಿಮ್ಮಪ್ಪ ಗೌಡ ಎಂಬವರು ದಿ:7–7–2008 ರಂದು ಉತ್ತರಿಸಿ ಪ್ರಕರಣದಲ್ಲಿ ತನ್ನ ಮೇಲೆ ಹೊರಿಸಿರುವ ಅಪರಾಧವನ್ನು ಅಲ್ಲಗಳೆದಿರುತ್ತಾರೆ. ಆದರೆ ವಾಹನದ ಮಾಲೀಕರಿಂದ ಯಾವುದೇ ಉತ್ತರ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ತನಿಖಾಧಿಕಾರಿಗಳು ತನಿಖಾ ವರದಿಯೊಂದಿಗೆ ಜಪ್ತುಪಡಿಸಿದ ಮದ್ಯದ ರಾಸಯನಿಕ ವಿಶ್ಲೇಷಣಾ ವರದಿಯನ್ನು ಲಗತ್ತಿಸಿ ಜಪ್ತುಪಡಿಸಿಕೊಳ್ಳಲಾದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವುದರಿಂದ ಹಾಗೂ ಮಾದರಿ ವಿಶ್ಲೇಷಣಾ ವರದಿಯಲ್ಲಿ ಮದ್ಯದ ಮಾದರಿಗಳಲ್ಲಿ ಮದ್ಯಸಾರದ ಅಂಶವು ಪತ್ತೆಯಾಗಿ ಮಾದರಿಗಳು ಭಾರತೀಯ ಮಾನಕ ಬುರ್‍ಯೋದ ಅಂಶಗಳಿಗ ಅನುಗುಣವಾಗಿರುವುದರಿಂದ ಸದ್ರಿ ಮದ್ಯವನ್ನು (ಮಾದರಿಗಳನ್ನು ಹೊರತು ಪಡಿಸಿ) ದಿನಾಂಕ:20–1–2009ರಂದು ಹೊರಡಿಸಿದ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಪ್ರಸ್ತುತ ಚಾಲ್ತಿಯಲ್ಲಿರುವ ಸರ್ಕಾರದ ಅದೇಶದಂತೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ನಾಶಪಡಿಸಲು ಆದೇಶಿಸಲಾಗಿರುತ್ತದೆ. ಅದರಂತೆ ಮದ್ಯವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ಸಮಕ್ಷಮದಲ್ಲಿ ದಿ:31–1–2009 ರಂದು ನಾಶಪಡಿಸಲಾಗಿರುತ್ತದೆ.

ನಂತರ ಪ್ರಕರಣದಲ್ಲಿ ವಿಚಾರಣೆಯನ್ನು ಪ್ರಾರಂಬಿಸಿ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅಭಿಯೋಗದ ಪರ ಸಾಕ್ಷಿಗಳು ಹಾಗೂ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ

**ವಿವಾದಾಂಶಗಳು**

1) ದಿನಾಂಕ:3–1–2008 ರಂದು ಜೀಪು ಸಂ:KA-21-M-7307 ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯದ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

3) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಕುಮಾರಿ ಪಿ.ಗೀತಾ ಅ.ಉ.ನಿ,ಸುಳ್ಯ ವಲಯ ಇವರು ದಿ:11–2–2009ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ತನ್ನ ಕಾರ್ಯಭಾರದ ಅವಧಿಯಲ್ಲಿ ದಿ: 8–2–2008 ರಂದು ಸುಳ್ಯ ಪೊಲೀಸ್ ಠಾಣೆಯ ಪೊಲೀಸ್ ಉಪ ನಿರೀಕ್ಷಕರವರು ಪ್ರಕರಣದಲ್ಲಿ ಅಮಾನತ್ತು ಮಾಡಿಕೊಂಡ ಜೀಪು ಸಂ:KA-21-M-7307 ಮತ್ತು ಮದ್ಯವನ್ನು ಮುಂದಿನ ಕ್ರಮದ ಬಗ್ಗೆ ಹಸ್ತಾಂತರಿಸಿರುತ್ತಾರೆ, ಜಪ್ತು ಪಡಿಸಿದ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಗಾಗಿ ಪತ್ರ ಬರೆದು ದಿ:21–2–2008 ರಂದು ಬಿ ವರದಿ ಪಡೆದು ಕೊಂಡಿರುತ್ತೇನೆ. ಪ್ರಾದಿಕಾರದ ಮದ್ಯಂತರ ಆದೇಶದಂತೆ ವಾಹನವನ್ನು ವಾಹನದ ಮಾಲೀಕರಿಗೆ ದಿ:9–4–2008ರಂದು ಬಿಡುಗಡೆಗೊಳಿಸಿರುತ್ತೇನೆ, ಜಪ್ತು ಪಡಿಸಿಕೊಂಡ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತೇನೆ, ಪ್ರಾಧಿಕಾರದ ಆದೇಶದಂತೆ ಜಪ್ತುಪಡಿಸಿಕೊಂಡ ಮದ್ಯವನ್ನು ನಾಶಪಡಿಸಿರುತ್ತೇನೆ ಎಂದು ಹೇಳಿಕೆ ನೀಡುತ್ತಾ ವಾಹನದ ಬಿ ರಿಜಿಸ್ಟ್ರಾರ್ ವರದಿ, ಪ್ರಾಧಿಕಾರದ ಮದ್ಯಂತರ ಆದೇಶ,ತನಿಖಾ ವರದಿ ಹಾಗೂ ಮದ್ಯ ಮುಟ್ಟುಗೋಲು ಅದೇಶವನ್ನು ವಿಚಾರಣಾ ವೇಳೆ ಯಲ್ಲಿ ಅನುಕ್ರಮವಾಗಿ ನಿಶಾನೆಪಿ–1ರಿಂದ ನಿಶಾನೆಪಿ–4 ರವರೆಗೆ ಗುರುತಿಸಿ ಸಾಕ್ಷ್ಯ ನೀಡಿರುತ್ತಾರೆ

**ಪ್ರಾ.ಸಾ–2:–**

ಪ್ರಕರಣದ ಸ್ವತಂತ್ರ ಸಾಕ್ಷಿದಾರರಾದ ಶ್ರೀ.ಎಸ್.ಕೊರಗಪ್ಪ, ಬಿನ್: ನಂಜಪ್ಪ, ನಾವೂರು ಮನೆ, ಗಾಂಧಿನಗರ, ಸುಳ್ಯ ಇವರು ದಿನಾಂಕ:12–8–2009 ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ, ತಕ್ಷಿರು ನಡೆದ ಸ್ಥಳಕ್ಕೆ ಹೋಗಿ ತಾನು ಮಹಜರಿಗೆ ಸಹಿ ಮಾಡಿರುವುದಿಲ್ಲ, ತಾನು ದಲಿತ ಸಮುದಾಯದ ಕಾರ್ಯಕರ್ತನಾಗಿದ್ದು ಕಾರ್ಯನಿಮಿತ್ತ ಆಗಾಗ್ಗೆ ಪೊಲೀಸ್ ಠಾಣೆಗೆ ಹೋಗುತ್ತಿದ್ದು, ಈ ಸಂಧರ್ಭದಲ್ಲಿ ಪೊಲೀಸ್ ಅಧಿಕಾರಿಗಳು ಕೊಟ್ಟ ಪತ್ರಕ್ಕೆ ಸಹಿ ಮಾಡಿರುತ್ತೇನೆ ಅಲ್ಲದೇ ತಕ್ಷೀರು ಸ್ಥಳ ಯಾವುದು ಎಂದು ನನಗೆ ಗೊತಿಲ್ಲ ಎಂದು ನುಡಿಯುತ್ತ ಅಭಿಯೋಗದ ಪರ "ಪ್ರತಿಕೂಲ ಸಾಕ್ಷಿ" ನೀಡಿ ಮಹಜರನ್ನು ಮತ್ತು ಅದರ ಮೇಲಿನ ತನ್ನ ಸಹಿಯನ್ನು ಅನುಕ್ರಮವಾಗಿ ನಿಶಾನೆ ಪಿ–2 ಮತ್ತು ನಿಶಾನೆ ಪಿ–2 ಎ ಎಂದು ಗುರುತಿಸಿ ಸಾಕ್ಷ್ಯ ನುಡಿದಿರುತ್ತಾರೆ.

**ಪ್ರಾ.ಸಾ –3**

ಪ್ರಕರಣದ ಸ್ವತಂತ್ರ ಸಾಕ್ಷಿದಾರರಾದ ಶ್ರೀ.ಉದಯಭಟ್ ,ಬಿನ್:ಈಶ್ವರ ರೈ, ಪೆರ್ಲಂಪಾಡಿ ಪುತ್ತೂರು ಇವರು ದಿನಾಂಕ:13–10–2009 ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ, ನ್ಯಾಯಾಲಯದಲ್ಲಿ ವಿಚಾರಣೆಗೆ ಇರುವ ಕ್ರೈಂ ಸಂ:4/2008 ಕ್ಕೆ ಸಂಬಂಧಿಸಿದಂತೆ ತಯಾರಿಸಲಾದ ಸ್ಥಳ

ಮಹಜರು ಬಗ್ಗೆ ನನಗೆ ಏನೂ ತಿಳಿದಿಲ್ಲ ಹಾಗೂ ಅದಕ್ಕೆ ಸಹಿ ಮಾಡಿರುವುದಿಲ್ಲ , ತಾನು ವೈಯಕ್ತಿಕ ಕೆಲಸಕ್ಕಾಗಿ ಠಾಣೆಗೆ ಹೋದ ಸಂದರ್ಭದಲ್ಲಿ ಖಾಲಿ ಕಾಗದದ ಮೇಲೆ ಸಹಿ ಮಾಡಿರುತ್ತೇನೆ, ಪ್ರಕರಣದಲ್ಲಿ ತಿಳಿಸಿರುವ ಸೊತ್ತುಗಳ ಜಪ್ತು ಬಗ್ಗೆ ನನಗೆ ಏನೂ ತಿಳಿದಿರುವುದಿಲ್ಲ ಪ್ರಕರಣಕ್ಕೆ ಸಂಬಂದಿಸಿದಂತೆ ಅಪರಾಧ ಸ್ಥಳದಲ್ಲಾಗಲೀ, ಮಹಜರು ಸಮಯದಲ್ಲಾಗಲೀ ತಾನು ಹಾಜರಿರುವುದಿಲ್ಲ ಎಂದು ಅಭಿಯೋಗದ ಪರ "ಪ್ರತಿಕೂಲ ಸಾಕ್ಷಿ" ನೀಡಿರುತ್ತಾರೆ.

**ಪ್ರಾ.ಸಾ–4**

ಶ್ರೀ.ಪವನ್ ಕುಮಾರ್, ಪೊಲೀಸ್ ನಿರೀಕ್ಷಕರು ಇವರು ಪ್ರಕರಣ ಪತ್ತೆ ಹಚ್ಚಿ ಮೊಕದ್ದಮೆ ದಾಖಲಿಸಿಕೊಂಡ ಬಗ್ಗೆ ದಿನಾಂಕ:6–7–2010ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿಯುತ್ತಾ, ತಾನು ಸುಳ್ಯ ಪೊಲೀಸ್ ಠಾಣೆಯ ಕರ್ತವ್ಯ ಸಮಯದಲ್ಲಿ ವಾಹನ ಜೀಪು ಸಂ:KA-21-M-7307 ರಲ್ಲಿ 16 ರಟ್ಟಿನ ಪೆಟ್ಟಿಗೆಗಳಲ್ಲಿ ಅಕ್ರಮ ಮದ್ಯ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಕ್ರೈಂ ಸಂ:4/2008 ದಿ:3–1–08ರಂದು ಮುಖ್ಯ ಆರೋಪಿ ವ್ಯಕ್ತಿಯಾದ ತಿಮ್ಮಪ್ಪ ಗೌಡ ಇವರ ವಿರುದ್ದ ಶ್ರೀ.ಕೊರಗಪ್ಪ ಹಾಗೂ ಉದಯ ಭಟ್ ಎಂಬವರನ್ನು ಸ್ವತಂತ್ರ ಸಾಕ್ಷಿದಾರರನ್ನಾಗಿ ಇಟ್ಟುಕೊಂಡು ಪ್ರಕರಣ ದಾಖಲಿಸಿರುವುದಾಗಿ, ಜಪ್ತು ಪಡಿಸಿಕೊಂಡ ಮದ್ಯದ ಮಾದರಿಗಳನ್ನು ವಿಶ್ಲೇಷಣೆಗಾಗಿ ತೆಗೆದು, ಸ್ಥಳದಲ್ಲಿಯೇ ಮಹಜರನ್ನು ಬರೆದು ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಥಮ ಮಾಹಿತಿಯನ್ನು ತಯಾರಿಸಿರುವ ಬಗ್ಗೆ ಹೇಳಿಕೆಗಳನ್ನು ನೀಡುತ್ತಾ ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಡಿಡಬ್ಲ್ಯೂ–1**

ರಕ್ಷಣಾ ಪರ ಸಾಕ್ಷಿದಾರರಾದ ಶ್ರೀ.ಹಮೀದ್ ಎಂ.ಹೆಚ್. ವಯನಾಡಿ ಹೌಸ್,ಮಂಡೆಕೋಲು ಸುಳ್ಯ ತಾಲೂಕು ಇವರು ದಿ:10–8–2010ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ನೀಡುತ್ತಾ, ತಾನು ವಾಹನದ ಮಾಲೀಕನಾಗಿದ್ದು, ವಾಹನವನ್ನು ತಿಮ್ಮಪ್ಪ ಗೌಡ ಎಂಬವರ ಉಪಯೋಗಕ್ಕೆ ತಿಂಗಳ ರೂ.3,000/– ಬಾಡಿಗೆ ಆಧಾರದಲ್ಲಿ ಕೊಟ್ಟಿರುತ್ತೇನೆ, ಈ ಬಗ್ಗೆ ಮೌಖಿಕ ಒಪ್ಪಂದ ಮಾಡಲಾಗಿದ್ದು, ಲಿಖಿತವಾಗಿ ದಾಖಲೆಗಳನ್ನು ಮಾಡಲಾಗಿರುವುದಿಲ್ಲ.ನನಗೆ ವಾಹನ ಜಪ್ತುಪಡಿಸಿಕೊಂಡ ಬಗ್ಗೆ ದಿ:4–1–2008ರಂದು ಗಮನಕ್ಕೆ ಬಂದಿರುತ್ತದೆ. ಈ ಹಿಂದೆ ಸದ್ರಿ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದಿಲ್ಲ, ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸಿಗೆ ಸರಿಯಾದ ಸಮಯದಲ್ಲಿ ಉತ್ತರ ನೀಡಿರುತ್ತೇನೆ. ನಾನು ಹೊರ ದೇಶಕ್ಕೆ ಹೋಗಲು ಪ್ರಯತ್ನಿಸುತ್ತಿರುವುದರಿಂದ ವಾಹನದ ಬಿಡುಗಡೆ ಇತ್ಯಾದಿ ಕೆಲಸ ಕಾರ್ಯಗಳಿಗೆ ಶ್ರೀ.ತಿಮ್ಮಪ್ಪ ಗೌಡರಿಗೆ ಜಿ.ಪಿ.ಎ ಕೊಟ್ಟಿರುತ್ತೇನೆ. ಪೊಲೀಸರು ಬೇಡಿಕೆ ಇಟ್ಟಾಗ ವಾಹನವನ್ನು ಅವರ ಉಪಯೋಗಕ್ಕೆ ನೀಡಲಿಲ್ಲ ಎಂಬ ಕಾರಣಕ್ಕಾಗಿ ಸುಳ್ಳು ಮೊಕದ್ದಮೆ ದಾಖಲಿಸಿ ವಾಹನವನ್ನು ಜಪ್ತುಪಡಿಸಿರುತ್ತಾರೆ. ಕಾರಣ ನನ್ನ ವಾಹನವನ್ನು ಮರಳಿ ದೊರಕಿಸಿಕೊಡಬೇಕಾಗಿ ಪ್ರಾರ್ಥಿಸಿ ಕೊಂಡಿರುತ್ತಾರೆ.

ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತ ವಾಹನವನ್ನು 1996ನೇ ಇಸವಿಯಲ್ಲಿ ಖರೀದಿಸಲಾಗಿದ್ದು, 2008ನೇ ಇಸವಿ ಮಾರ್ಚ್ ತಿಂಗಳಲ್ಲಿ ಶ್ರೀ.ತಿಮ್ಮಪ್ಪ ಗೌಡ ಇವರಿಗೆ ಬಾಡಿಗೆ ಆಧಾರದಲ್ಲಿ ನೀಡಿರುತ್ತೇನೆ. ತಿಮ್ಮಪ್ಪ ಗೌಡರು ತನಗೆ ಪರಿಚಯಸ್ಥರಾಗಿದ್ದು ಸದ್ರಿಯವರೇ ವಾಹನವನ್ನು ಚಲಾಯಿಸುತ್ತಿದ್ದು ಪೊಲೀಸ್ ಅಧಿಕಾರಿಗಳು ದಿ:3–1–2008ರಂದು ಖಚಿತ ಮಾಹಿತಿಯ ಮೇರೆಗೆ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟ ಮಾಡಿದ ಕಾರಣಕ್ಕಾಗಿ ವಾಹನವನ್ನು ಜಪ್ತುಪಡಿಸಿಕೊಂಡು ಪ್ರಕರಣ ದಾಖಲಿಸಿರುತ್ತಾರೆ, ಜೀಪಿನಲ್ಲಿ ಮದ್ಯ ತುಂಬಿದ್ದ ರಟ್ಟಿನ ಪೆಟ್ಟಿಗೆಗಳು ಪತ್ತೆಯಾಗಿರುತ್ತದೆ ಹಾಗೂ ಮದ್ಯವನ್ನು ಸಾಗಾಟ ಮಾಡಲು ರಹದಾರಿ ಇರುವುದಿಲ್ಲ ಎಂದರೆ ಸರಿಯಲ್ಲ. ಹಾಗೂ ಮದ್ಯವನ್ನು ಮಾರಾಟ ಮಾಡುವ ಉದ್ದೇಶದಿಂದ ಅಕ್ರಮವಾಗಿ ಸಾಗಾಟ ಮಾಡುತ್ತಿರುವುದನ್ನು ಪೊಲೀಸ್‌ನವರು ಪತ್ತೆಹಚ್ಚಿ ವಶಪಡಿಸಿಕೊಂಡು ಮಹಜರು ಜರುಗಿಸಿದ್ದರೂ , ಜೀಪಿನಲ್ಲಿ ಅಕ್ರಮ ಮದ್ಯ ಸಾಗಾಟ ಮಾಡದಂತೆ ಮುಂಜಾಗ್ರತೆ ವಹಿಸಿರುವುದಿಲ್ಲ, ಜೀಪಿನ ಚಾಲಕನಿಗೂ ಕೂಡಾ ಅಕ್ರಮವಾಗಿ ಮದ್ಯ ಸಾಗಾಟ ಮಾಡದಂತೆ ಸೂಚನೆ ನೀಡಿರುವುದಿಲ್ಲ, ವಾಹನದ ಚಾಲಕ ತಿಮ್ಮಪ್ಪ ಗೌಡ ತಿಳುವಳಿಕೆಯಿಂದಲೇ ಮತ್ತು ನನ್ನ ಪರೋಕ್ಷ ಸಮ್ಮತಿಯಿಂದಲೇ ಮದ್ಯವನ್ನು ಸಾಗಾಟವನ್ನು ಮಾಡುತ್ತಿದುದ್ದು ಹಾಗೂ ವಿಚಾರಣೆಯಲ್ಲಿ ಹೇಳಿದ ಅಂಶ ಗಳು ಸುಳ್ಳು ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಡಿಡಬ್ಲ್ಯೂ–2**

ರಕ್ಷಣಾ ಪರ ಸಾಕ್ಷಿದಾರರಾದ ಶ್ರೀ.ತಿಮ್ಮಪ್ಪ ಗೌಡ, ಬಿನ್: ಕೂಸಪ್ಪ ಗೌಡ, ಕೇನಾಜೆ ಮನೆ, ಮಂಡೆಕೋಲು, ಸುಳ್ಯ ತಾಲೂಕು ಇವರು ದಿ:23–11–2010ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ನೀಡುತ್ತಾ , ವಾಹನ ಸಂ: KA-21-M-7307 ಜೀಪು ಶ್ರೀ. ಹಮೀದ್‌ರವರಿಗೆ ಸೇರಿದ್ದು, ತಾನು ಜಿ.ಪಿ.ಎ ದಾರರಾಗಿದ್ದು ಮಾಸಿಕ ರೂ.3,000/– ಆಧಾರದಲ್ಲಿ ವಾಹನವನ್ನು ಪಡೆದು ಕೊಂಡಿರುತ್ತೇನೆ. ಸದ್ರಿ ವಾಹನವನ್ನು ಹಲವಾರು ಬಾರಿ ಪೊಲೀಸಿನವರು ತಮ್ಮ ಸ್ವಂತ ಉಪಯೋಗಕ್ಕೆ ಕೇಳಿದ್ದು, ಸರಿಯಾಗಿ ಬಾಡಿಗೆ ಕೊಡದ ಕಾರಣ ಹಾಗೂ ತನ್ನ ಅನಾರೋಗ್ಯದಿಂದ ವಾಹನವನ್ನು ಚಲಾಯಿಸಲು ಅಸಾಧ್ಯವಾಗಿರುವ ಸಂದರ್ಭದಲ್ಲಿ ಪೊಲೀಸಿನವರ ಉಪಯೋಗಕ್ಕೆ ವಾಹನವನ್ನು ಒದಗಿಸದೇ ಇರುವ ಕಾರಣಕ್ಕೆ ಸುಳ್ಯ ಪೊಲೀಸರು ಈ ಪ್ರಕರಣವನ್ನು ದಾಖಲಿಸಿದ್ದು ವಾಹನದಲ್ಲಿ ಯಾವುದೇ ಅಕ್ರಮ ಮದ್ಯ ಸಾಗಾಟ ಮಾಡಲಿಲ್ಲ ಎಂದು ಸಾಕ್ಷಿ ನುಡಿಯುತ್ತ ವಾಹನವನ್ನು ಬಿಡುಗಡೆ ಮಾಡಿ ಕೊಡಬೇಕಾಗಿ ಪ್ರಾಧಿಕಾರದ ಮುಂದೆ ವಿನಂತಿಸಿಕೊಂಡಿರುತ್ತಾರೆ.

ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತ ವಾಹನವನ್ನು ಮಾರ್ಚ್ 2008ನೇ ಇಸವಿಯಲ್ಲಿ ಹಮೀದ್ ಇವರಿಂದ ಬಾಡಿಗೆ ಪಡೆದುಕೊಂಡಿರುತ್ತೇನೆ. ಪ್ರಸ್ತುತ ದಾಖಲಾದ ಮೊಕದ್ದಮೆ ಅಲ್ಲದೇ ಈ ಹಿಂದೆ ಯಾವುದೇ ಮೊಕದ್ದಮೆ ಸುಳ್ಯ ಠಾಣೆಯಲ್ಲಿ ದಾಖಲೆಯಾಗಿರುವುದಿಲ್ಲ. ಹಾಗೂ ಸುಳ್ಯ ಪೊಲೀಸರೊಡನೆ ವೈಯಕ್ತಿಕ ಪರಿಚಯವಿರುವುದಿಲ್ಲ. ಈ ಪ್ರಕರಣವು ಸುಳ್ಳು ಪ್ರಕರಣವಾಗಿದ್ದು ಈ ಬಗ್ಗೆ ಪೊಲೀಸರ ವಿರುದ್ದ ಯಾವುದೇ ತಕರಾರು ಮಾಡಿರುವುದಿಲ್ಲ. ಸದ್ರಿ ಪ್ರಕರಣದಲ್ಲಿ ವಾಹನದ ಸೀಟಿನ ಮದ್ಯೆ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಅಕ್ರಮವಾಗಿ ಇಟ್ಟಿದ್ದನ್ನು ಪೊಲೀಸರು ತಪಾಸಣೆ ಮಾಡಿ ಮಹಜರು ಮುಖೇನಾ ವಶಪಡಿಸಿದ್ದಾರೆ ಎಂದರೆ ಸರಿಯಲ್ಲ, ಹಾಗೂ ಉದ್ದೇಶ ಪೂರ್ವಕವಾಗಿ ಅಬಕಾರಿ ಕಾಯಿದೆ ವಿರುದ್ದವಾಗಿ ಅಕ್ರಮವಾಗಿ ಮದ್ಯ ಸಾಗಿಸುತ್ತಿದ್ದೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

ಪ್ರಕರಣದಲ್ಲಿ ಇತ್ತಂಡಗಳ ವಾದ ವಿವಾದವನ್ನು ಆಲಿಸಲಾಗಿ ರಕ್ಷಣಾ ಪರ ವಕೀಲರು ವಾದ ಮಂಡಿಸುತ್ತ ಪ್ರಾ.ಸಾ –4ರವರ ಹೇಳಿಕೆಗಳು ಸಮರ್ಪಕವಾಗಿರುವುದಿಲ್ಲ ಹಾಗೂ ಪ್ರಾ.ಸಾ 2 ಮತ್ತು 3ರ ಸ್ವತಂತ್ರ ಸಾಕ್ಷಿದಾರರುಗಳು ಪ್ರತಿಕೂಲ ಹೇಳಿಕೆಗಳನ್ನು ನೀಡಿರುವುದು ಹಾಗೂ ವಾಹನದ ಮಾಲೀಕರು ವಾಹನವನ್ನು ಬಾಡಿಗೆ ಆಧಾರದಲ್ಲಿ ಜಿ.ಪಿ.ಎ ದಾರರಿಗೆ ನೀಡಿರುವುದರಿಂದ ವಾಹನದ ಮಾಲೀಕರು ನೇರವಾಗಿ ಅಕ್ರಮದಲ್ಲಿ ಭಾಗಿಯಾಗದೇ ಇರುವುದು ಹಾಗೂ ವಾಹನವನ್ನು ಶೋಧನೆ ಮಾಡಲು ಅಬಕಾರಿ ಕಾಯಿದೆ ಕಲಂ 53 ರಡಿ ಸರ್ಚ್ ವಾರೆಂಟ್ ಪಡೆಯದೇ ಇರುವುದು ಹಾಗೂ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54ರಡಿ ರೆಕಾರ್ಡ್ ಆಫ್ ರೀಜನ್ಸನ್ನು ದಾಖಲಿಸದೇ ಇರುವುದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಡಿಯಲ್ಲಿ ಅವಕಾಶ ಇಲ್ಲ ಎಂಬುದಾಗಿ ವಾದ ಮಂಡಿಸಿರುತ್ತಾರೆ. ಸಹಾಯಕ ಅಭಿಯೋಗ ನಿರ್ದೇಶಕರು ಪ್ರತಿವಾದ ಮಂಡಿಸುತ್ತ ಪ್ರಕರಣವು ಯಾವುದೇ ಕ್ರಿಮಿನಲ್ ಪ್ರಕರಣವಾಗಿರದೇ,ಮುಟ್ಟುಗೋಲು ನಡವಳಿಯಾಗಿರುವುದರಿಂದ ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳ ಸಾಕ್ಷ್ಯದಲ್ಲಿ ಕೆಲವೊಂದು ಸಣ್ಣಪುಟ್ಟ ವ್ಯತಿರೀಕ್ತತೆಗಳು ಕಂಡುಬಂದರೂ ಅದು ಅಭಿಯೋಜನೆಗೆ ಮಾರಕವಾಗುವುದಿಲ್ಲ ಹಾಗೂ ವ್ಯತಿರೀಕ್ತತೆಗಳು ಸಾಕ್ಷಿಗಳ ಸಾಕ್ಷ್ಯದಲ್ಲಿ ಸರ್ವೆ ಸಾಮಾನ್ಯವಾಗಿರುತ್ತದೆ. ಭಾರತೀಯ ಸಾಕ್ಷ್ಯ ಅಧಿನಿಯಮ ಕಲಂ 3ರಡಿ ಮೌಖಿಕ ಸಾಕ್ಷ್ಯವನ್ನು ವಿಚಾರಣೆ ಮಾಡಿದಾಗ ಸಾಕ್ಷ್ಯವು ಗುಣಾತ್ಮಕವಾಗಿರಬೇಕು ಹೊರತು ಸಾಕ್ಷ್ಯದ ಒಟ್ಟು ಪ್ರಮಾಣವನ್ನು ಗಣನೆಗೆ ತೆಗೆದು ಕೊಳ್ಳಲಾರದು. ಯಾವುದೇ ಒಂದು ಸಂಗತಿಯನ್ನು ಕಾನೂನಡಿ ಸಾಬೀತುಪಡಿಸಬೇಕಾದರೆ ಒಂದು ನಿರ್ಧಿಷ್ಟ ಪ್ರಮಾಣದ ಸಾಕ್ಷಿಗಳು ಬೇಕು ಎಂಬಂತೆ ಕಾನೂನು ಅಂಶ ಇರುವುದಿಲ್ಲ. ಈ ಕಾನೂನಿನ ಅಂಶವನ್ನು ಭಾರತೀಯ ಸಾಕ್ಷ್ಯ ಅಧಿನಿಯಮದ ಕಲಂ 134ರಡಿ ಸ್ಪಷ್ಟ ಪಡಿಸಲಾಗಿರುವುದು. ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳು ಪ್ರಕರಣವನ್ನು ಪತ್ತೆಹಚ್ಚಿ ಮುಂದಿನ ತನಿಖೆ ನಡೆಸಿ ಆರೋಪಿ/ವಾಹನದ ಮಾಲೀಕರು ತನ್ನ ವಾಹನವನ್ನು ಈ ಕೃತ್ಯದಲ್ಲಿ ನಿಯೋಜಿಸಿರುವುದು ಅಕ್ರಮವಾಗಿದ್ದು ಯಾವುದೇ ಮುಂಜಾಗತ್ರೆಯನ್ನು ತೆಗೆದುಕೊಳ್ಳದೇ ಇರುವುದು ಸಾಭೀತಾಗಿರುತ್ತದೆ. ಈ ಬಗ್ಗೆ ಇಲಾಖಾ ಸಾಕ್ಷಿಗಳು ಬಹಳ ಸ್ಪಷ್ಟವಾಗಿ ಹಾಗೂ ತಮ್ಮ ಕರ್ತವ್ಯದ ನೆಲೆಯಲ್ಲಿ ಪ್ರಮಾಣೀಕವಾಗಿ ಸಾಕ್ಷ್ಯ ನೀಡಿರುವುದರಿಂದ ಸ್ವತಂತ್ರ ಸಾಕ್ಷಿಗಳು ಪ್ರತಿಕೂಲವಾದರೂ ಕೂಡಾ ಅಭಿಯೋಗಕ್ಕೆ ಈ ಅಂಶದಿಂದ ಯಾವುದೇ ರೀತಿಯಲ್ಲಿ ಮಾರಕವಾಗುವುದಿಲ್ಲ. ವಾಹನದ ಮಾಲೀಕರು ತನ್ನ ರಕ್ಷಣಾ ಸಾಕ್ಷ್ಯದಲ್ಲಿ ಹೇಳಿಕೊಂಡಂತೆ ಕೃತ್ಯ ಸಮಯದಲ್ಲಿ ಅವರು ವಿದೇಶದಲ್ಲಿದ್ದು ತನ್ನ ವಾಹನದ ಬಳಸುವಿಕೆಯ ಬಗ್ಗೆ ಚಾಲಕ/ಏಜೆಂಟ್ ಅಥವಾ ವಾಹನದ ಸುಪರ್ಧಿ ಇರುವ ಇತರೇ ವ್ಯಕ್ತಿಗಳ ಮೇಲೆ ಯಾವುದೇ ನಿಯಂತ್ರಣ ಅಥವಾ ಹತೋಟಿ ಇಟ್ಟು ಯವುದೇ ಅಕ್ರಮಗಳನ್ನು ಮಾಡದೇ ಇರುವಂತೆ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳದೇ ಇರುವುದು ಪ್ರಕರಣದಲ್ಲಿ ಬಹಳಷ್ಟು ಸ್ಪಷ್ಟವಾಗಿರುತ್ತದೆ. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ಯಲ್ಲಿ ಹೇಳಿದ ರುಜುವಾತಿನ ಭಾರವನ್ನು ವಾಹನದ ಮಾಲೀಕರು ನಿಭಾಯಿಸುವಲ್ಲಿ ವಿಫಲರಾಗಿರುವುದು ಸಾಭೀತುಪಡಿಸುತ್ತದೆ. ವಾಹನ ಶೋಧನೆ ಸಂದರ್ಭದಲ್ಲಿ ಕಲಂ 53ರಡಿ ಶೋಧನಾ ವಾರೆಂಟನ್ನು ಪಡೆಯದೇ ಇರುವುದು ಅಭಿಯೋಗದ ವಿಫಲತೆ ಎಂಬುದಾಗಿ ಪರಿಗಣಿಸಲಾಗದು. ಏಕೆಂದರೆ ಕಲಂ 54 ರಡಿ ರೆರ್ಕಾಡ್ ಆಫ್ ರೀಜನ್ಸ್ ನ್ನು ದಾಖಲಿಸದೇ ಇರುವುದು ಕಾನೂನಿನಡಿ ಅಜ್ಞಾಪಕವಾಗಿರುವುದಿಲ್ಲ ಎಂಬುದನ್ನು ಈ ಕೆಳಕಂಡಂತೆ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪನ್ನು ಆಧರಿಸಿ ವ್ಯಾಖ್ಯಾನಿಸಬೇಕಾಗಿರುತ್ತದೆ. "ಶೋಧನಾ ವಾರೆಂಟ್‌ಗಳನ್ನು ಪಡೆಯಲು ವಿಫಲರಾದ ಬಗ್ಗೆ ಕಾರಣಗಳನ್ನು ದಾಖಲಿಸದೇ ಇರುವುದು ಕೇವಲ ಕಾನೂನಿನ ಪ್ರಕ್ರಿಯೆಯಲ್ಲಿ ಒಂದು ಅನಿಯಮತೆಯಾಗಿದ್ದು ಕೇವಲ ಅದೇ ಒಂದು ಕಾರಣದಡಿ ಇಡೀ ಶೋಧನೆಯನ್ನು ಅಥವಾ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಪ್ರಾದಿಕಾರವು ಮಾಡಿದ ಅಂತಿಮ ಮುಟ್ಟುಗೋಲು ಆದೇಶವನ್ನು ಕಾನೂನಿನಡಿ ಅಸಿಂಧುವೆಂದು ಘೋಷಿಸಲು ಬರುವುದಿಲ್ಲ. ಶೋಧನೆಯನ್ನು ಮಾಡುವ ಮೊದಲು ವಾರೆಂಟ್ ಪಡೆದು ಕೊಳ್ಳದೇ ಇರುವ ಬಗ್ಗೆ ಅಥವಾ ವಾರೆಂಟ್ ಪಡೆಯಲು ವಿಫಲರಾದ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ಕಾರಣಗಳನ್ನು ದಾಖಲಿಸದೇ ಇರುವುದು ಅರೋಪಿಯ ಹಕ್ಕಿಗೆ ಅಥವಾ ಆತನ ಹಿತಾಸಕ್ತಿಗೆ ದಕ್ಕೆಯನ್ನು ಉಂಟು ಮಾಡುತ್ತದೆ ಎಂಬುದಾಗಿ ಅರೋಪಿ ತೋರಿಸಿ ಕೊಡಬೇಕಾಗುತ್ತದೆ. ಶೋಧನಾ ವಾರೆಂಟನ್ನು ಪಡೆಯಲೇ ಬೇಕು ಎಂಬುದು ಖಡ್ಡಾಯವಾಗಿರುವುದಿಲ್ಲ ಅಥವಾ ಅಜ್ಞಾಪಕವಾಗಿರುವುದಿಲ್ಲ. ಶೋಧನಾ ವಾರೆಂಟನ್ನು ಪಡೆದುಕೊಳ್ಳಲು ವಿಫಲರಾದ ಬಗ್ಗೆ ಕಾರಣಗಳನ್ನು ನಮೂದಿಸದೇ ಇರುವುದು ಇಡೀ ಶೋಧನೆ ಮತ್ತು ಅದರ ನಂತರದ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಅಂತಿಮ ಮುಟ್ಟುಗೋಲು ಆದೇಶ ಅಸಿಂಧುಗೊಳಿಸುವುದಿಲ್ಲ. ಈ ರೀತಿ ಅಸಿಂಧುಗೊಳಿಸಿದರೇ ಹಾಡುಹಗಲೇ ಅಥವಾ ಕಣ್ಣೆದುರೇ ಅಕ್ರಮ ಮದ್ಯ ಸಮೇತ ಪ್ರಕರಣದ ಅಪರಾಧಿಗಳನ್ನು ಕೈಚೆಲ್ಲಬೇಕಾಗುತ್ತದೆ ಕಾನೂನನ್ನು ಅಪರಾಧಿ ಗಳಿಗೆ ಸಹಾಯವಾಗುವ ರೀತಿಯಲ್ಲಿ ಅರ್ಥಮಾಡಿಕೊಂಡಲ್ಲಿ ಇನ್ನೂ ಹೆಚ್ಚಿನ ಅಪರಾಧಗಳು ಆಗುವ ಸಂಭಾವ್ಯತೆಗಳು ಜಾಸ್ತಿ. ಆದುದರಿಂದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54 ರ ಹಿಂದಿನ ಉದ್ದೇಶವನ್ನು ಅರಿತು ವ್ಯಾಖ್ಯಾನಿಸಬೇಕಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಗೌರವಾನ್ವಿತ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ನೀಡಿದ ತೀರ್ಪು ಸಂ: ILR: 2004: KAR:536 ರ ಪುಟ ಸಂ:527ರಲ್ಲಿ ವಿವರವಾಗಿ ಪ್ರಸ್ತಾವಿಸಲಾಗಿದೆ. ಹಾಗೂ ಪ್ರಕರಣದಲ್ಲಿ ಸ್ವತಂತ್ರ ಸಾಕ್ಷಿಗಳ ಹೇಳಿಕೆಗಳು ಸಿಂಧು ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ವಾಹನದಲ್ಲಿ ತನ್ನ ತಿಳುವಳಿಕೆಗೆ ಬಾರದೇ ಮದ್ಯ ಸಾಗಾಟವಾಗಿರುವುದು ಎಂಬ ಅಂಶವನ್ನು ವಾಹನದ ಮಾಲೀಕರು ಸ್ಪಷ್ಟ ಪಡಿಸದೇ ಇರುವುದು ಹಾಗೂ ಪ್ರಕರಣವನ್ನು ಪೊಲೀಸರು ದ್ವೇಷದಿಂದ ಉದ್ದೇಶ ಪೂರ್ವಕವಾಗಿ ದಾಖಲಿಸಿಕೊಂಡಿರುವುದು ಎಂದು ರಕ್ಷಣಾ ಹೇಳಿಕೆಗಳನ್ನು ನೀಡಿರುವರಾದರೂ ಈ ಬಗ್ಗೆ ಪುರಾವೆಗಳನ್ನು ಒದಗಿಸಿ ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಕಾರಣ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ತಮ್ಮ ಪ್ರತಿವಾದವನ್ನು ಮಂಡಿಸಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳ ಮೇಲೆ ಹಾಗೂ ರಕ್ಷಣಾ ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:3–1–2008 ರಂದು ಜೀಪು ಸಂ:KA-21-M-7307ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ,ಸುಳ್ಯ ಇವರ ಪ್ರ.ಮಾ.ವ ಸಂ:4/2008 ದಿ:3–1–2008 ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿ ಪ್ರಕಾರ ಮದ್ಯ ಎಂದು ದೃಢ ಪಟ್ಟಿರುವುದು

ಹಾಗೂ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಮದ್ಯ ಅನಧಿಕೃತವಾಗಿ ವಾಹನದ ಮೂಲಕ ಸಾಗಾಟ ಮಾಡಲಾಗಿಲ್ಲ ಎಂಬುದನ್ನು ವಾಹನದ ಮಾಲೀಕರು ಹಾಗೂ ವಾಹನವನ್ನು ಬಾಡಿಗೆ ಆಧಾರದಲ್ಲಿ ಪಡೆದುಕೊಂಡ ವ್ಯಕ್ತಿ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ವಿಚಾರಣೆ ವೇಳೆಯಲ್ಲಿ ಹಾಜರಾಗಿ ಹೇಳಿಕೆ ನೀಡಿರುವರಾದರೂ ಸತ್ಯಾಂಶವನ್ನು ಸಾಭೀತುಪಡಿಸುವಲ್ಲಿ ಯಾವುದೇ ಪುರಾವೆಗಳನ್ನು ಒದಗಿಸಲು ವಿಫಲರಾಗಿ ಕರ್ನಾಟಕ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ಹೇಳುವಂತಹ ರುಜುವಾತುವಿನ ಭಾರವನ್ನು ಸಮಂಜಸವಾಗಿ ನಿಭಾಯಿಸಿರುವುದಿಲ್ಲ. ಆದುದರಿಂದ ಅಭಿಯೋಜನ ಪರ ಮಂಡಿಸಿದ ಸಾಕ್ಷ್ಯಾಧಾರವನ್ನು ಅವಲಂಭಿಸಿ ವಾಹನದ ಮಾಲೀಕರ ವಿರುದ್ಧ ಪ್ರತಿಕೂಲ ಭಾವನೆಯನ್ನು ಹೊಂದಿ ವಾಹನದ ಮಾಲೀಕರೇ ಈ ಕೃತ್ಯವನ್ನು ಎಸಗಿರುತ್ತಾರೆ ಎಂಬ ಬಗ್ಗೆ ನಿರ್ಣಯಕ್ಕೆ ಬರಲು ಸಾಕಷ್ಟು ವಿಷಯ ಸಾಮಾಗ್ರಿಗಳು ಕಂಡು ಬಂದಿರುವುದರಿಂದ ಸದ್ರಿ ವಾಹನ ವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿರುತ್ತದೆ.

ಇಂತಹ ಅಬಕಾರಿ ಸೊತ್ತುಗಳ ಅಕ್ರಮ ಸಾಗಾಣಿಕೆಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಬಳಸಲಾಗಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತು ಪಡಿಸುವುದು ವಾಹನದ ಮಾಲೀಕರ ಹಾಗೂ ವಾಹನದ ಸುಪರ್ಧಿ ಹೊಂದಿರುವವರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ವಾಹನದ ಮಾಲೀಕರು ಹಾಗೂ ಜಿ.ಪಿ.ಎ ದಾರರು ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಹೇಳಿಕೆಗಳನ್ನು ನೀಡಿರುವರಾದರೂ ಸೂಕ್ತ ಪುರಾವೆಗಳನ್ನು ಒದಗಿಸಿ ತನ್ನ ರುಜುವಾತು ಭಾರವನ್ನು ಸಮರ್ಪಕವಾಗಿ ನಿರ್ವಹಿಸದೇ ಇರುವುದರಿಂದ ವಾಹನವನ್ನು ತನ್ನ ಅರಿವಿಗೆ ಬಾರದೇ ಇಂತಹ ಅಕ್ರಮ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುತ್ತಾರೆ ಮೇಲಿನ ಅಂಶಗಳನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ತೊಡಗಿಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಕಾರಣ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ದಿ:3–1–2008ರಂದು ಪೊಲೀಸ್ ಉಪ ನಿರೀಕ್ಷಕರು,ಸುಳ್ಯ ಪೊಲೀಸ್ ಠಾಣೆ,ಸುಳ್ಯ ಇವರು ಪ್ರಕರಣ ಸಂ: 4/2008ರಂತೆ ಅಕ್ರಮವಾಗಿ 138.240 ಲೀಟರು ಮದ್ಯವನ್ನು ವಾಹನ ಸಂ: KA-21-M-7307 ಜೀಪು ಇದರಲ್ಲಿ ಸಾಗಾಟ ಮಾಡಿರುವುದು ಸಾಭೀತಾಗಿದ್ದು, ಇದು ಕರ್ನಾಟಕ ಅಬಕಾರಿ 1965ರ 32,34 38 (ಎ) ಮತ್ತು 43(ಎ) ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ 43(ಎ)2ರಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ತೀರ್ಮಾನಿಸ ಬಹುದಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ,ಸುಳ್ಯ ಇವರ ತಕ್ಷೀರು ಸಂ:4/2008,ದಿ:3–1–2008ರಲ್ಲಿ ಜಪ್ತುಪಡಿಸಿರುವ ವಾಹನ ಜೀಪು ಸಂ: KA-21-M-7307 (ಚಾಸೀಸ್ ಸಂ:CL55O-MD-4KU-DU-66290 ಮತ್ತು ಇಂಜಿನ್ ಸಂ: DU-66290ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43 ಎ (2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:26.03.2008ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ವಾಹನ ಸಂ:KA-21-M-7307 ಜೀಪನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ಈ ಆದೇಶದ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರು ಈ ಪ್ರಾಧಿಕಾರದ ಪರ ಅವರ ಸ್ವಾಧೀನಕ್ಕೆ ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–03–2011ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I : ಶ್ರೀಮತಿ.ಪಿ.ಗೀತಾ ,ಅ.ಉ.ನಿ,ಸುಳ್ಯ ವಲಯ

ಪ್ರಾ.ಸಾ–2 :ಶ್ರೀ.ಎಸ್.ಕೊರಗಪ್ಪ ,ಬಿನ್:ನಂಜಪ್ಪ, ನಾವೂರು ಮನೆ,ಗಾಂಧಿನಗರ,ಸುಳ್ಯ

ಪ್ರಾ.ಸಾ–3: ಶ್ರೀ.ಉದಯ ಭಟ್, ಬಿನ್:ದಿ:ಈಶ್ವರ ಪೈ, ಪೆರ್ಲಂಪಾಡಿ,ಪುತ್ತೂರು

ಪ್ರಾ.ಸಾ–4: ಶ್ರೀ.ಪವನ್‌ಕುಮಾರ್, ಬಿನ್:ಬಿ.ಸಿದ್ದರಾಮ, ಪೊ.ನಿ ,ಕರ್ನಾಟಕ ಪೊಲೀಸ್ ತರಬೇತಿ ಶಾಲೆ, ಚೆನ್ನಪಟ್ಟಣ

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

ನಿಶಾನೆ ಪಿ–I : ವಾಹನದ ಬಿ ರಿಜಿಸ್ಟ್ರಾರ್ ವರದಿ
ನಿಶಾನೆ ಪಿ–2 : ಪ್ರಾಧಿಕಾರದ ಮಧ್ಯಂತರ ಆದೇಶ ಪ್ರತಿ
ನಿಶಾನೆ ಪಿ–3 : ತನಿಖಾ ವರದಿ
ನಿಶಾನೆ ಪಿ–4 : ಮದ್ಯ ಮುಟ್ಟುಗೋಲು ಅದೇಶ
ನಿಶಾನೆ ಪಿ–5 : ಮಹಜರು ಪ್ರತಿ
ನಿಶಾನೆ ಪಿ–5ಎ : ಪ್ರಾ.ಸಾ–2 ಮತ್ತು 4ರವರ ಸಹಿ
ನಿಶಾನೆ ಪಿ–6 : ವರದಿ
ನಿಶಾನೆ ಪಿ–7 : ಪ್ರಥಮ ಮಾಹಿತಿ ಪ್ರತಿ
ನಿಶಾನೆ ಪಿ–7ಎ : ಅದರ ಮೇಲಿನ ಸಹಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–**

ಡಿಡಬ್ಲ್ಯೂ–1 : ಶ್ರೀ.ಎಂ.ಹೆಚ್.ಹಮೀದ್, ಬಿನ್:ಹಸ್ಸೈನಾರ್ ಹಾಜಿ,
ಮೈನಾಡಿ ಹೌಸ್, ಮಂಡೆಕೋಲು ,ಸುಳ್ಯ ತಾಲೂಕು
ಡಿಡಬ್ಲ್ಯೂ–2: ಶ್ರೀ.ತಿಮ್ಮಪ ಗೌಡ, ಬಿನ್:ಕೂಸಪ್ಪ ಗೌಡ, ಕೇನಾಜೆ ಮನೆ, ಮಂಡೆಕೋಲು ಸುಳ್ಯ

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–

ನಿಶಾನೆ ಡಿ–1 :– ಮಾನ್ಯ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ, ಸುಳ್ಯ ಇವರ ಸಿ.ಸಿ.ನಂ:522/8ರಲ್ಲಿ ಅಂತಿಮ ಆದೇಶ ದಿ:03–11–2010.

**ಬಿ.ವಿ ಹೂವಪ್ಪ ಗೌಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.465

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/ 147/ಡಿಟಿಸಿಆರ್/2009–10, ದಿನಾಂಕ:31.03.2011**

**ಉಪಸ್ಥಿತರು:** ಬಿ.ವಿ. ಹೂವಪ್ಪಗೌಡ,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು
ಕಡಬ ಪೊಲೀಸ್ ಠಾಣೆ
ಕಡಬ,ಪುತ್ತೂರು

**ಆರೋಪಿ:**

1. ಪರಮೇಶ್ವರ ಗೌಡ, ಬಿನ್: ಸೇಸಪ್ಪ ಗೌಡ, ಮಣಿಯಡ್ಕ ಮನೆ,ಮುರುಳ್ಯಗ್ರಾಮ,ಸುಳ್ಯ ತಾಲೂಕು
2. ಕುಶಾಲಪ್ಪ ಗೌಡ. ಬಿನ್:ದಿ:ಹೊನಪ್ಪ ಗೌಡ, ಕೊರಿಯಾರ್ ಮನೆ, ಕ್ಯಾಮಣ ಗ್ರಾಮ, ಪುತ್ತೂರು

**ವಾಹನದ ಮಾಲೀಕರು**

ಶ್ರೀ.ಚಿನ್ನಪ್ಪ ಕೆ. ಬಿನ್:ಬಾಲಣ್ಣ ಗೌಡ, ಕುದ್ಮಾರ್ , ಪುತ್ತೂರು ತಾಲೂಕು

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು,ಕಡಬ ಪೊಲೀಸ್ ಠಾಣೆ ಪುತ್ತೂರು ಇವರು ದಿನಾಂಕ:5–1–2010ರಂದು ತಮ್ಮ ಸಿಬ್ಬಂದಿಯವರೊಂದಿಗೆ ಕೋಡಿಂಬಾಳ, ಚಾರ್ವಕ ಡೋಲ್ಪಾಡಿಯಿಂದ ಸವಣೂರು ಕಡೆಗೆ ವಾಹನ ತಪಾಸಣೆ ಪ್ರಯುಕ್ತ ಸಾಗುತ್ತಿದ್ದಾಗ ಪುತ್ತೂರು ತಾಲೂಕಿನ ಕುದ್ಮಾರ್ ಗ್ರಾಮದ ಬರೇಪಾಡಿ ಎಂಬಲ್ಲಿ ದೊರೆತ ಖಚಿತ ಮಾಹಿತಿಯಂತೆ ಬಿಳಿ ಬಣ್ಣದ ಅಂಬಾಸಿಡರ್ ಕಾರು ಸಂ:KA-19-M-7857 ಇದರಲ್ಲಿ 2 ರಟ್ಟಿನ ಪೆಟ್ಟಿಗೆಗಳಲ್ಲಿ ಒಟ್ಟು 8.640 ಲೀಟರು ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 15ರ ಪ್ರಕಾರ ಅಪರಾಧ ಹಾಗೂ 32, 34 ಮತ್ತು 43ಎ ರಂತೆ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ವಾಹನದಲ್ಲಿ ಪತ್ತೆಯಾದ 2 ಮದ್ಯ ತುಂಬಿದ ಪೆಟ್ಟಿಗೆಗಳಿಂದ ತಲಾ ಎರಡರಂತೆ ಒಟ್ಟು 4 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ವಾಹನ ಸಮೇತ ಮದ್ಯವನ್ನು ಜಪ್ತುಪಡಿಸಿಕೊಂಡು ಮಹಜರು ಕ್ರಮ ಜರುಗಿಸಿ ಆರೋಪಿಗಳಾದ ಪರಮೇಶ್ವರ ಗೌಡ, ಬಿನ್:ಸೇಸಪ್ಪ ಗೌಡ, ಮಣಿಯಡ್ಕ ಮನೆ, ಮುರುಳ್ಯ ಗ್ರಾಮ, ಸುಳ್ಯ ಮತ್ತು ಕುಶಾಲಪ್ಪ ಗೌಡ, ಬಿನ್:ದಿ:ಹೊನಪ್ಪ ಗೌಡ, ಕೋರಿಯಾರ್ ಮನೆ, ಕ್ಯಾಮಣ ಗ್ರಾಮ,ಪುತ್ತೂರು ತಾಲೂಕು ಇವರ ವಿರುದ್ಧ ಕಡಬ ಪೊಲೀಸ್ ಠಾಣಾ ಕ್ರೈಂ ಸಂ:2/2010 ದಿ:5–1–2010 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ ಹಾಗೂ ದಾಖಲಾತಿಗಳನ್ನು ಮಾನ್ಯ

ನ್ಯಾಯಾಲಯಕ್ಕೆ ಸಲ್ಲಿಸಿ ದಿನಾಂಕ:08.01.2010ರಂದು ವಶಪಡಿಸಿಕೊಂಡ ವಾಹನ ಹಾಗೂ ಸೊತ್ತುಗಳನ್ನು ಇಲಾಖಾ ವಶಕ್ಕೆ ಹಸ್ತಾಂತರಿಸಲು ಈ ಪ್ರಾಧಿಕಾರದ ಅನುಮತಿ ಕೋರಿದ ಮೇರೆಗೆ ದಿನಾಂಕ:15.01.2010ರ ಪ್ರಾಧಿಕಾರದ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ಪತ್ರ ಸಂಖ್ಯೆ: ಅನಿ/ಪು.ವ/ ಆರ್‌ಸಿಆರ್/ 18/09-10, ದಿನಾಂಕ:13.04.2010ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಈ ಕೆಳಗಿನ ಸೊತ್ತುಗಳನ್ನು ಪೊಲೀಸ್ ಅಧಿಕಾರಿಗಳಿಂದ ಸ್ವೀಕರಿಸಿಕೊಂಡಿರುವ ಬಗ್ಗೆ ವರದಿಸಿರುತ್ತಾರೆ.

1) ಬಿಳಿ ಬಣ್ಣದ ಅಂಬಾಸಿಡರ್ ಕಾರು ಸಂ: KA-19-M-7857

2) ಒಂದು ಗೋಣಿಚೀಲದಲ್ಲಿ 180 ಎಂಎಲ್‌ನ ಮೈಸೂರು ಲ್ಯಾನ್ಸರ್ ವಿಸ್ಕಿಯ 24 ಬಾಟಲಿಗಳಲ್ಲಿ 4.320 ಲೀ ಮದ್ಯ

3) ಒಂದು ಗೋಣಿಚೀಲದಲ್ಲಿ 180 ಎಂಎಲ್‌ನ ಶಾಟ್ ವಿಸ್ಕಿಯ 24 ಬಾಟಲಿಗಳಲ್ಲಿ 4.320 ಲೀ ಮದ್ಯ

(ಕ್ರ.ಸಂ:2 ಮತ್ತು 3ರ ಮದ್ಯದಿಂದ ತಲಾ ಎರಡರಂತೆ ಒಟ್ಟು 4 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ತನಿಖಾ ವರದಿ ಸಂಖ್ಯೆ: ಅನಿ/ ಪು.ವ/ ಆರ್‌ಸಿಆರ್/18/2009-10 ದಿ:13-4-2010ರ ವರದಿಯೊಂದಿಗೆ ಲಗತ್ತಿಸಲಾದ ಸಹಾಯಕ ಪೊಲೀಸ್ ಅಧೀಕ್ಷಕರು,ಪುತ್ತೂರು ಉಪ ವಿಭಾಗ ಇವರು ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು,ಮಂಗಳೂರು ವಲಯ ಇವರಿಂದ ಪಡೆದು ಸಲ್ಲಿಸಿದ್ದ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಇಎಕ್ಸ್ ನಂ:280-4 ದಿ:26-2-2010 ರಲ್ಲಿ ಮದ್ಯದಲ್ಲಿ ಮದ್ಯಸಾರದ ಪ್ರಮಾಣ ಕ್ರಮವಾಗಿ 42% ಮತ್ತು 43% ಇರುವುದಾಗಿ ದೃಡೀಕರಿಸಿರುತ್ತಾರೆ. ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ವರದಿಯನ್ನು ತನಿಖಾದಿಕಾರಿಗಳು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಪುತ್ತೂರು, ದ.ಕ ಜಿಲ್ಲೆ ಇವರಿಂದ ಪಡೆದು ಪ್ರತಿಯನ್ನು ತನಿಖಾ ವರದಿಯೊಂದಿಗೆ ಈ ಪ್ರಾದಿಕಾರಕ್ಕೆ ಸಲ್ಲಿಸಿ ಜಪ್ತುಪಡಿಸಿಕೊಳ್ಳಲಾದ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆಯಲಾದ ಬಿ ರಿಜಿಸ್ಟ್ರಾರ್ ವರದಿಯಲ್ಲಿ ಶ್ರೀ.ಕೆ.ಹರೀಶ್ ಪೂಜಾರಿ,ಬಿನ್:ತಿಮ್ಮಪ್ಪ ಪೂಜಾರಿ, ಕೆಳಂಜೆ ಹೌಸ್, ಪಡೀಲ್, ವೀರಕಂಭ,ಬಂಟ್ವಾಳ ತಾಲೂಕು ಇವರು ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ದೃಡೀಕೃತವಾಗಿರುವುದರಿಂದ, ಸದ್ರಿ ವಾಹನದ ನೊಂದಣಿ ಮಾಲೀಕರಿಗೆ ಈ ಪ್ರಾದಿಕಾರದಿಂದ ದಿ:27-4-2010ರಂದು ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಬಾರದು? ಎಂಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸು ನೊಂದಾಯಿತ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ದಿನಾಂಕ:3-5-2010ರಂದು ನೊಂದಾಣಿ ಮಾಲೀಕರಿಗೆ ಜಾರಿಯಾಗಿದ್ದು, ವಾಹನದ ಮಾಲೀಕರು ದಿ:6-5-2010 ರಂದು ಸದ್ರಿ ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತಾ, ವಾಹನವನ್ನು ಈ ಮೊದಲೇ ಶ್ರೀ.ಮಾದಪ್ಪ ಗೌಡ,ಬಿನ್:ನಾರಾಯಣ ಗೌಡ, ಕುದ್ಮಾರ್ ಗ್ರಾಮ, ಬರೇಪ್ಪಾಡಿ , ಪುತ್ತೂರು ತಾಲೂಕು ಇವರಿಗೆ ಮಾರಾಟ ಮಾಡಿರುವ ಬಗ್ಗೆ ವರದಿಸಿ ಈ ಬಗ್ಗೆ ಪುತ್ತೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ ಬಿ ಎಕ್ಸ್ ಟ್ರಾಕ್ಟ್ ವರದಿಯ ಪ್ರತಿಯನ್ನು ಪ್ರಾದಿಕಾರಕ್ಕೆ ಒಪ್ಪಿಸಿದ್ದು ಸದ್ರಿ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ಶ್ರೀ.ಚಿನ್ನಪ್ಪ ಕೆ.,ಬಿನ್:ಬಾಲಣ್ಣ ಗೌಡ, ಕುದ್ಮಾರ್,ಪುತ್ತೂರು ತಾಲೂಕು ಇವರು ದಿ:24-3-2008ರಿಂದ ಅನ್ವಯವಾಗುವಂತೆ ಸದ್ರಿ ವಾಹನದ ನೊಂದಣಿ ಮಾಲೀಕರಾಗಿರುವುದು ಕಂಡು ಬಂದಿರುತ್ತದೆ.ಅದರಂತೆ ಸದ್ರಿ ಬಿ ಎಕ್ಸ್ ಟ್ರಾಕ್ಟ್ ವರದಿಯ ಆಧಾರದಲ್ಲಿ ವಾಹನದ ಮಾಲೀಕರಾದ ಶ್ರೀ.ಚಿನ್ನಪ್ಪ ಕೆ.,ಬಿನ್:ಬಾಲಣ್ಣ ಗೌಡ, ಕುದ್ಯಾರ್ ,ಪುತ್ತೂರು ತಾಲೂಕು ಇವರಿಗೆ ಪ್ರಾದಿಕಾರದಿಂದ ದಿ:17-3-2011ರಂದು ಕಾರಣ ಕೇಳಿ ನೋಟಿಸು ನೀಡಲಾಗಿದ್ದು,ವಾಹನದ ಮಾಲೀಕರು ಸದ್ರಿ ನೋಟಿಸಿಗೆ ದಿ:25-3-2011ರಂದು ಪ್ರಾದಿಕಾರಕ್ಕೆ ನೀಡಿದ ಉತ್ತರದಲ್ಲಿ ಪ್ರಕರಣವು ಮಾನ್ಯ ಪುತ್ತೂರು ಜೆ.ಎಂ.ಎಫ್ ಸಿ ನ್ಯಾಯಾಲಯ ದಲ್ಲಿ ಖುಲಾಸೆಗೊಂಡಿದ್ದು ವಾಹನದ ಬಿಡುಗಡೆ ಬಗ್ಗೆ ಮುಂದುವರಿಯುವರೇ ಆರ್ಥಿಕ ವ್ಯವಸ್ಥೆ ಇಲ್ಲದೇ ಇರುವುದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳ ಬಹುದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ತನಿಖಾ ವರದಿಯನ್ನು ಆಧರಿಸಿ, ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/147/ಡಿಟಿಸಿಆರ್/2009-10, ದಿನಾಂಕ:20.01.2011ರ ಆದೇಶದಲ್ಲಿ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳ ಪೈಕಿ ವಾಹನವನ್ನು ಹೊರತುಪಡಿಸಿ ಉಳಿದ ಮದ್ಯ (ಮಾದರಿಗಳನ್ನು ಹೊರತುಪಡಿಸಿ) ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪ್ರಸ್ತುತ ಜಾರಿಯಲ್ಲಿರುವ ಸರ್ಕಾರದ ಆದೇಶದಂತೆ ಮದ್ಯವನ್ನು ನಾಶಪಡಿಸಲಾಗಿರುತ್ತದೆ.

ವಾಹನವನ್ನು ದಿನಾಂಕ:05.01.2010ರಂದು ವಶಪಡಿಸಿಕೊಂಡು ಈಗಾಗಲೇ 1 ವರ್ಷ 2 ತಿಂಗಳು ಕಳೆದರೂ, ಪ್ರಕರಣದಲ್ಲಿ ದಸ್ತಗಿರಿಯಾದ ಆರೋಪಿಗಳಾಗಲೀ, ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ವಾಹನದ ಮಾಲೀಕತ್ವ ನಿರೂಪಿಸಿ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಜಪ್ತು ಸಂದರ್ಭದಲ್ಲಿ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರವು ಮನಗಂಡು ಮುಟ್ಟುಗೋಲು ನಡವಳಿಯನ್ನು ಪ್ರಾರಂಭಿಸಲಾಗಿರುತ್ತದೆ.

ಮುಟ್ಟುಗೋಲು ನಡವಳಿ ಪ್ರಯುಕ್ತ ವಿಚಾರಣೆಯನ್ನು ಆರಂಭಿಸಿ, ಈ ಕೆಳಗಿನಂತೆ ವಿವಾದಾಂಶಗಳ ಉತ್ತರ ಪಡೆಯಲಾಗಿರುತ್ತದೆ.

**1) ಮೊದಲನೇ ವಿವಾದಾಂಶ:** ದಿ:5-1-2010 ರಂದು ವಾಹನ ಸಂ: KA-19-M-7857 ಅಂಬಾಸಿಡರ್ ಕಾರಿನಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತೆ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತು ಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾದಿಕಾರಿಗಳಾದ ಶ್ರೀ.ಶಿವಪ್ರಸಾದ್, ಅ.ನಿ ಪುತ್ತೂರು ವಲಯ ಇವರು ದಿ:10–3–2011ರಂದು ಪ್ರಾದಿಕಾರದ ಮುಂದೆ ಹಾಜರಾಗಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನ ಸಮೇತ ಎಲ್ಲಾ ಸೊತ್ತು ಮತ್ತು ದಾಖಲೆಗಳನ್ನು ಸ್ವೀಕರಿಸಿಕೊಂಡು, ವಾಹನದ ಬಿ ರಿಜಿಸ್ಟಾರ್ ಎಕ್ಸ್ ಟ್ರಾಕ್ಟ್ ವರದಿ ಮತ್ತು ಮೌಲ್ಯ ಮಾಪನ ವರದಿಯನ್ನು ಪ್ರಾದೇಶಿಕ ಸಾರಿಗೆ ಅದಿಕಾರಿಗಳು,ಪುತ್ತೂರು ಇವರಿಂದ ಪಡೆದುಕೊಂಡ ಬಗ್ಗೆ ಹಾಗೂ ಪ್ರಕರಣದ ಸೊತ್ತುಗಳನ್ನು ಅಬಕಾರಿ ಕಾಯಿದೆ ಕಲಂ 43 ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಪ್ರಾದಿಕಾರಕ್ಕೆ ವರದಿ ಸಲ್ಲಿಸಿರುವ ಬಗ್ಗೆ ಸಾಕ್ಷ್ಯ ನೀಡಿ ಮುಖ್ಯ ದಾಖಲೆಗಳನ್ನು ಗುರುತಿಸಿರುತ್ತಾರೆ. ಪಾಟೀ ಸವಾಲು: ಜಪ್ತು ಪಡಿಸಿಕೊಂಡ ವಾಹನದ ಮಾಲೀಕರಾಗಲೀ,ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ: 2**

ಪ್ರಾಸಿಕ್ಯೂಶನ್ ಪರ ಪ್ರಕರಣ ಪತ್ತೆಹಚ್ಚಿದ ಶ್ರೀ.ವಿನಾಯಕ ,ಪೊ.ಉ.ನಿ ರವರು ಪ್ರಾದಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನೀಡುತ್ತಾ ಖಚಿತ ವರ್ತಮಾನದ ಮೇರೆಗೆ ತಾನು ಸಿಬ್ಬಂಧಿಯವರೊಂದಿಗೆ ದಿ:5–1–2010ರಂದು ವಾಹನ ಅಂಬಾಸಿಡರ್ ಕಾರು ಸಂ: ಕೆಎ–19–ಎಂ–7857 ಇದರಲ್ಲಿ ಯಾವುದೇ ಪರವಾನಿಗೆ ಇಲ್ಲದೇ 180 ಎಂಎಲ್‌ನ 48 ಬಾಟಲಿಗಳಲ್ಲಿ ಒಟ್ಟು 8.640 ಲೀಟರು ಮದ್ಯವನ್ನು ಮಾರಾಟ ಮಾಡಲು ಹೊಂದಿಕೊಂಡಿರುವುದನ್ನು ಪತ್ತೆಹಚ್ಚಿ, ಜಪ್ತುಪಡಿಸಿಕೊಳ್ಳಲಾದ ಮದ್ಯದ ಮಾದರಿಗಳನ್ನು ಪಂಚ ಸಾಕ್ಷಿದಾರರ ಸಮಕ್ಷಮ ತೆಗೆದು ಮಹಜರು ಜರುಗಿಸಿ ಸೊತ್ತುಗಳನ್ನು ವಶಕ್ಕೆ ತೆಗೆದುಕೊಂಡು ಅನಂತರದಲ್ಲಿ ಆರೋಪಿಗಳಾದ ಪರಮೇಶ್ವರ ಗೌಡ, ಮತ್ತು ಕುಶಾಲಪ್ಪ ಗೌಡ ಇವರುಗಳ ವಿರುದ್ದ ಕ್ರೈಂ ಸಂ:2/2010 ದಿನಾಂಕ:5–1–2010ರಂತೆ ಮೊಕದ್ದೆಮೆ ದಾಖಲಿಸಿಕೊಂಡು ಪ್ರ.ಮಾ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ಜಪ್ತುಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ಕಾಯಿದೆಯನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುವುದಾಗಿ ಸಾಕ್ಷ್ಯ ನೀಡುತ್ತಾ ಪ್ರಕರಣದ ಮುಖ್ಯ ದಾಖಲೆಗಳನ್ನು ಗುರುತಿಸಿರುತ್ತಾರೆ.

ಪಾಟೀ ಸವಾಲು: ಜಪ್ತು ಪಡಿಸಿಕೊಂಡ ವಾಹನದ ಮಾಲೀಕರಾಗಲೀ,ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸ ಲಾಯಿತು.

ವಿಚಾರಣಾ ಸಂದರ್ಭದಲ್ಲಿ ವಾಹನದ ಮಾಲೀಕರಾಗಲಿ, ಅವರ ಪರ ಪ್ರತಿನಿಧಿಗಳಾಗಲೀ ಹಾಜರಿರದ ಕಾರಣ ರಕ್ಷಣಾ ಪರ ಸಾಕ್ಷಿಗಳು ಇಲ್ಲವೆಂದು ಪರಿಗಣಿಸಿ, ಅಭಿಯೋಗದ ಪರ ಸಾಕ್ಷಿಗಳ ವಿಚಾರಣೆ ಮುಕ್ತಾಯಗೊಳಿಸಿ, ಸರ್ಕಾರಿ ಅಭಿಯೋಜಕರ ವಾದ ಮಂಡನೆಯನ್ನು ಆಲಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:05.01.2010ರಂದು ಜಪ್ತು ಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂ: KA-19-M-7857ರಲ್ಲಿ ಅಕ್ರಮವಾಗಿ 8.640 ಲೀಟರ್ ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡಿರುವುದು, ವಾಹನದ ಮಾಲೀಕರು ಅಥವಾ ತತ್ಸಂಬಂಧ ವ್ಯಕ್ತಿಗಳು ತಮ್ಮ ತಿಳುವಳಿಕೆಯಿಂದಲೇ ಈ ಅಪರಾಧವೆಸಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ವಾಹನಕ್ಕೆ ಸಂಬಂಧಿಸಿದಂತೆ ತನಿಖಾದಿಕಾರಿಗಳು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು ಸಲ್ಲಿಸಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ದೃಡೀಕೃತವಾಗಿರುವ ಮಾಲೀಕರಿಗೆ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸಿಗೆ ವಾಹನದ ಮಾಲೀಕರು ಉತ್ತರಿಸುತ್ತಾ ಸದ್ರಿ ವಾಹನವನ್ನು ಪರಭಾರೆ ಮಾಡಲಾಗಿರುವುದರಿಂದ ಸದ್ರಿ ವಾಹನಕ್ಕೂ ತನಗೂ ಯಾವುದೇ ಸಂಬಂಧವಿಲ್ಲ ಎಂದು ತಿಳಿಸಿ, ಸದ್ರಿ ವಾಹನದ ಬಗ್ಗೆ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಪುತ್ತೂರು ಇಲ್ಲಿಂದ ಪಡೆದು ಪ್ರಾದಿಕಾರಕ್ಕೆ ಒಪ್ಪಿಸಿದ್ದು ಸದ್ರಿ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ದೃಡೀಕೃತವಾಗಿರುವ ವಾಹನದ ಮಾಲೀಕರಿಗೆ ನೀಡಲಾದ ಕಾರಣ ಕೇಳಿ ನೋಟಿಸಿಗೆ ವಾಹನದ ಮಾಲೀಕರು ಉತ್ತರಿಸುತ್ತಾ ವಾಹನದ ಬಿಡುಗಡೆ ಬಗ್ಗೆ ವ್ಯವಹರಿಸಲು ತಾನು ಆರ್ಥಿಕವಾಗಿ ಅಸಮರ್ಥನಾಗಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆಂದು ತಮ್ಮ ಒಪ್ಪಿಗೆಯನ್ನು ವ್ಯಕ್ತಪಡಿಸಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾದಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರ ದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಕಡಬ ಪೊಲೀಸ್ ಠಾಣೆ,ಕಡಬ ಇವರ ಠಾಣಾ ತಕ್ಷೀರು ಸಂಖ್ಯೆ: 2/2010 ದಿನಾಂಕ:05.01.2010ರಂದು ದಾಖಲಿಸಿದ ಪ್ರಕರಣದಲ್ಲಿ ಆರೋಪಿಯು 8.640 ಲೀಟರ್ ಅಕ್ರಮ ಮದ್ಯವನ್ನು ಸಾಗಾಣಿಕೆ ಮಾಡುವುದನ್ನು ಪತ್ತೆಹಚ್ಚಿ,

ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂ: KA-19-M-7857ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 2 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಅಥವಾ ತಕ್ಷೀರು ದಾಖಲಿಸಿದ ಪೊಲೀಸ್ ಠಾಣೆಯಲ್ಲಿ ಅಥವಾ ಕಾರ್ಯವ್ಯಾಪ್ತಿಯ ಅಬಕಾರಿ ಇಲಾಖಾ ಕಛೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಅಥವಾ ಆರೋಪಿಗಳು ವಾಹನದ ಮಾಲೀಕತ್ವ ನಿರೂಪಿಸಿ ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ತಕ್ಷೀರಿನ ತನಿಖಾಧಿಕಾರಿಗಳು ಪ್ರಾದೇಶಿಕ ಅಧಿಕಾರಿಗಳಿಂದ ಪಡೆದು ಒಪ್ಪಿಸಿದ್ದ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಲಾಗಿರುವ ವಾಹನದ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 43ಬಿ ರಡಿಯಲ್ಲಿ ಕಾರಣ ಕೇಳಿ ನೋಟಿಸನ್ನು ನೀಡಲಾಗಿ, ಸದ್ರಿ ಮಾಲೀಕರು ವಾಹನವನ್ನು ಪರಭಾರೆ ಮಾಡಿರುವುದಾಗಿ ತಿಳಿಸಿ ಈ ಸಂಬಂಧ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದನ್ನು ಪರಿಶೀಲಿಸಿ, ಸದ್ರಿ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಲಾಗಿರುವ ನೊಂದಣಿ ಮಾಲೀಕರಿಗೆ ಪ್ರಾಧಿಕಾರದಿಂದ ಕಾರಣ ಕೇಳಿ ನೋಟಿಸು ನೀಡಲಾಗಿ ಸದ್ರಿ ವ್ಯಕ್ತಿಯು ವಾಹನವನ್ನು ಬಿಡುಗಡೆಗೊಳಿಸಲು ಅರ್ಥಿಕವಾಗಿ ಅಸಮರ್ಥನಾಗಿರುವುದಾಗಿ ತಿಳಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದೆಂದು ತಮ್ಮ ಸಮ್ಮತಿ ಸೂಚಿಸಿರುವುದನ್ನು ಪರಿಗಣಿಸಿ, ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ವಾಹನ ಅಂಬಾಸಿಡರ್ ಕಾರು ಸಂ: KA-19-M-7857 ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಸಿ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/147/ಡಿಟಿಸಿಆರ್/2009–10, ದಿನಾಂಕ:31.03.2011**

ಬಿ.ವಿ.ಹೂವಪ್ಪ ಗೌಡ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 43 (ಬಿ) ಅಡಿ ಕ್ರಮ ಜರುಗಿಸಿ, ಪೊಲೀಸ್ ಉಪ ನಿರೀಕ್ಷಕರು,ಕಡಬ ಪೊಲೀಸ್ ಠಾಣೆ,ಕಡಬ ಇವರ ಠಾಣಾ ಕ್ರೈಂ ಸಂ: 2/2010 ದಿನಾಂಕ:05.01.2010ರಲ್ಲಿ ಜಪ್ತುಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂ: KA-19-M-7857 (ಚಾಸೀಸ್ ನಂ: AJU724554 ಮತ್ತು ಇಂಜಿನ್ ಸಂ:6EDKU133417 ) ನ್ನು ನಿಯಮ 43(ಸಿ) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:31.03.2011 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1:– ಶ್ರೀ.ಶಿವಪ್ರಸಾದ್, ಅ.ನಿ.,ಪುತ್ತೂರು ವಲಯ
ಪ್ರಾ.ಸಾ–2:– ಶ್ರೀ.ವಿನಾಯಕ, ಪೊ.ಉ.ನಿ, ಕದ್ರಿ ಪೊಲೀಸ್ ಠಾಣೆ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಬಿ ಎಕ್ಸ್ ಟ್ರಾಕ್ಟ್ ವರದಿಯ ಪ್ರತಿ
ನಿಶಾನೆ ಪಿ–2 : ಮೌಲ್ಯ ಮಾಪನ ವರದಿ ಪ್ರತಿ
ನಿಶಾನೆ ಪಿ–3 : ರಾಸಾಯನಿಕ ವಿಶ್ಲೇಷಕರ ವರದಿ
ನಿಶಾನೆ ಪಿ–4 : ತನಿಖಾ ವರದಿ
ನಿಶಾನೆ ಪಿ–4 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–5 : ಮಹಜರು
ನಿಶಾನೆ ಪಿ–5 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–6 : ಪ್ರಥಮ ಮಾಹಿತಿ ವರದಿ ಪ್ರತಿ
ನಿಶಾನೆ ಪಿ–6 ಎ : ಅದರ ಮೇಲಿನ ಸಹಿ.
ನಿಶಾನೆ ಪಿ–7 : ಅಧಿಕೃತ ಅಧಿಕಾರಿಗಳಿಗೆ ಬರೆದ ಪತ್ರ
ನಿಶಾನೆ ಪಿ–7 ಎ : ಅದರ ಮೇಲಿನ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

– ಇಲ್ಲ –

**ಬಿ.ವಿ ಹೂವಪ್ಪ ಗೌಡ**
ಪಿ.ಆರ್.466 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**KARNATAKA ELECTRICITY REGULATORY COMMISSION, BANGALORE**

**Notification No.Y/01/4 dated 3rd June 2011**

**Sixth Amendment to KERC (Recovery of Expenditure for Supply of Electricity) Regulations, 2004.**

**Preamble:**

Whereas, Section 46 of the Electricity Act, 2003 empowers the State Commission to authorize by way of regulations, a Distribution Licensee to charge from a person requiring a supply of electricity in pursuance of Section 43, any expenses reasonably incurred in providing any electrical line or plant used for the purpose of giving that supply, the Commission by virtue of the said powers, read with Section 181 of the Act has notified " KERC (Recovery of Expenditure for Supply of Electricity) Regulations, 2004" in the Notification no.Y/01/4 dated 12-11-2004 and the same was published in Part-3 of Gazette of Karnataka dated 16-12-2004 (Page nos.2216 to 2222). Consequent to request by the prospective Consumers the Commission deemed it appropriate to bring in amendment to the existing KERC (Recovery of Expenditure for Supply of Electricity) Regulations, 2004.Hence, this Sixth Amendment is notified.

**AMENDMENT**

In exercise of the powers conferred by section 181 read with section 46 and sub-section (2) of section 43 of the Electricity Act 2003 (Central Act 36 of 2003) and all powers enabling it in that behalf, the Karnataka Electricity Regulatory Commission hereby makes the following Regulations further to amend KERC (Recovery of Expenditure for Supply of Electricity) Regulations, 2004.

**I. Title and commencement:**

a) These Regulations may be called the KERC (Recovery of Expenditure for Supply of Electricity) (Sixth Amendment) Regulations, 2004.

b) These Regulations shall come into force from the date of publication in the official Gazette of Karnataka.

c) These Regulations shall extend to the whole of the state of Karnataka.

**II. Amendments to the following Regulations of KERC (Recovery of Expenditure for Supply of Electricity) Regulations, 2004:**

The existing provisions as in column 3 of the Table below shall stand substituted by the provisions as in column 4:

| Sl. No. | Clause No | Contents of Regulation (Existing) | Contents of Regulation (Amended) |
|---|---|---|---|
| 1 | 2 | 3 | 4 |
| | 3.1.5<br>Note (4)<br>KERC (Recovery of Expenditure for Supply of Electricity) Regulations, 2004. | In case the sanctioned plan indicates two or more buildings in the same premises or if the sanctioned plans are separate & in different names but the buildings are attached &/or share a common passage or staircase they shall be clubbed together to calculate built up area. | In case the sanctioned plan indicates two or more buildings in the same premises or if the sanctioned plans are separate & in different names but the buildings are attached &/or share a common passage or staircase they shall be clubbed together to calculate built up area.<br>In case of buildings having separate khatas and sanction plans in different names and there is no entrance or common passage or way from one building to another inside the buildings and each building having separate entrance from road side, such buildings need not be clubbed together to calculate built up area even though they share a common wall or common roof. They shall be treated separately for arranging power supply. |

By Order of the Commission,

**T.A. PARTHASARATHY**

Secretary,

Karnataka Electricity Regulatory Commission.

PD-73